

# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೧೨–೧೩ನೇ ಸಾಲಿನ ಎಂ.ಫಿಲ್. ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಪುರಂದರದಾಸ ಮತ್ತು ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ವಿಡಂಬನೆ : ಒಂದು ಅಧ್ಯಯನ


ನಿಬಂಧಕಾರರು

ಎಚ್.ಎಂ.ರೇಖಾ

ನೋಂದಣಿ ಸಂಖ್ಯೆ : KVTMKS - 00597

ಕನ್ನಡ ಎಂ.ಫಿಲ್ ವಿದ್ಯಾರ್ಥಿನಿ (ಹಂಪಿ, ಕ.ವಿ.ವಿ.)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಲೀಲಾ ಅಪ್ಪಾಜಿ

ಪ್ರಾಂಶುಪಾಲರು

ಮಹಿಳಾ ಸರ್ಕಾರಿ ಕಾಲೇಜು

ಮಂಡ್ಯ – ೫೭೧೪೦೧





ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೨–೧೩



# ಕನ್ನಡ ವಿಶ್ವವಿದ್ಯಾಲಯ

## ಹಂಪಿ

೨೦೧೨–೧೩ನೇ ಸಾಲಿನ ಎಂ.ಫಿಲ್. ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಪುರಂದರದಾಸ ಮತ್ತು ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ವಿಡಂಬನೆ : ಒಂದು ಅಧ್ಯಯನ

ನಿಬಂಧಕಾರರು

**ಎಚ್.ಎಂ.ರೇಖಾ**

ನೋಂದಣಿ ಸಂಖ್ಯೆ : KVTMKS - 00597

ಕನ್ನಡ ಎಂ.ಫಿಲ್ ವಿದ್ಯಾರ್ಥಿನಿ (ಹಂಪಿ, ಕ.ವಿ.ವಿ.)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಲೀಲಾ ಅಪ್ಪಾಜಿ
ಪ್ರಾಂಶುಪಾಲರು
ಮಹಿಳಾ ಸರ್ಕಾರಿ ಕಾಲೇಜು
ಮಂಡ್ಯ – ೫೭೧೪೦೧

ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೨–೧೩

# ಅಭ್ಯರ್ಥಿಯ ಘೋಷಣಾ ಪತ್ರ

**"ಪುರಂದರದಾಸ ಮತ್ತು ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ವಿಡಂಬನೆ : ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮಸಂಖ್ಯೆ KVTMKS - 00597 ವಿದ್ಯಾರ್ಥಿನಿ ಆದ ನಾನು ೨೦೧೨-೧೩ನೇ ಸಾಲಿನ ಪರೀಕ್ಷೆಗಾಗಿ **ಡಾ. ಲೀಲಾ ಅಪ್ಪಾಜಿ, ಪ್ರಾಂಶುಪಾಲರು, ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ – ೫೭೧೪೦೧** ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ಮೈಸೂರು
ದಿನಾಂಕ: ೨೨-೦೭-೨೦೧೩

**(ಎಚ್.ಎಂ.ರೇಖಾ)**
೨೦೧೨-೧೩ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು.

# ದೃಢೀಕರಣ ಪ್ರಮಾಣಪತ್ರ

೨೦೧೨-೧೩ನೇ ಸಾಲಿನಲ್ಲಿ ಕ್ರಮಸಂಖ್ಯೆ KVTMKS-00597ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿನಿಯಾದ **ಎಚ್.ಎಂ.ರೇಖಾ** ಅವರು ನನ್ನ ಮಾರ್ಗದರ್ಶನದಲ್ಲಿ **"ಪುರಂದರದಾಸ ಮತ್ತು ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ವಿಡಂಬನೆ : ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಳಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು
ದಿನಾಂಕ: ೨೨-೦೭-೨೦೧೩

(ಡಾ. ಲೀಲಾ ಅಪ್ಪಾಜಿ)
ಪ್ರಾಂಶುಪಾಲರು
ಮಹಿಳಾ ಸರ್ಕಾರಿ ಕಾಲೇಜು
ಮಂಡ್ಯ – ೫೭೧೪೦೧

ಡಾ. ಲೀಲಾ ಅಪ್ಪಾಜಿ
ಪ್ರಾಂಶುಪಾಲರು
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ.

# "ಪುರಂದರದಾಸ ಮತು ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ವಿಡಂಬನೆ : ಒಂದು ಅಧ್ಯಯನ"

## ಪ ರಿ ವಿ ಡಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕರ್ನಾಟಕ ಧಾರ್ಮಿಕ ಸಾಂಸ್ಕೃತಿಕ ಇತಿಹಾಸದಲ್ಲಿ ಪುರಂದರದಾಸ ಮತ್ತು ಕನಕದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅನುಸ್ಯೂತವಾಗಿ ಹರಿದುಕೊಂಡು ಬಂದ ಜೀವನ ಮೌಲ್ಯಗಳನ್ನು ಜನಸಾಮಾನ್ಯರಿಗೆ ಅವರದೇ ಆದ ಭಾಷೆಯಲ್ಲಿ ಮುಟ್ಟಿಸಿ ಮನೋರಂಜನೆಯ ಮೂಲಕ ಅವರ ಮನೋವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು. ವಿಷ್ಣುಭಕ್ತರಾದ ಇವರಿಬ್ಬರು ವಿಷ್ಣು ಪಾರಮ್ಯವನ್ನು ತಮ್ಮ ಕೃತಿಗಳಲ್ಲಿ ಸಾರಿದರು. ಕರ್ನಾಟಕದಲ್ಲಿ ಅವತರಿಸಿದ ದ್ವೈತಮತ ಪ್ರತಿಪಾದನೆ ಮಾಡಿದ ಮಧ್ವಾಚಾರ್ಯರ ಅನುಯಾಯಿಗಳಾಗಿ ಮಧ್ವಸಿದ್ಧಾಂತವನ್ನು ವಿಶೇಷವಾಗಿ ಅಧ್ಯಯನ ಮಾಡಿದವರು, ಅದನ್ನು ನಂಬಿದವರು. ಭಾರತದಲ್ಲಿ ಪರಂಪರೆಯಾಗಿ ನಡೆದು ಬಂದಂತೆ ತಾವು ನಂಬಿದ ಧರ್ಮದ ಪ್ರಸಾರಕ್ಕಾಗಿಯೇ ಭಾಷೆಯನ್ನು ಬಳಸಿಕೊಂಡವರು. ಹೀಗಾಗಿ ಇವರ ಕೀರ್ತನೆಗಳಲ್ಲೆಲ್ಲ ಧಾರ್ಮಿಕ ಒಲವುಗಳು ಹಾಸುಹೊಕ್ಕಾಗಿರುವುದನ್ನು ಕಾಣಬಹುದು. ಧರ್ಮವೇ ಅವರ ಸ್ಫೂರ್ತಿಮೂಲ.

ಆದರೆ ಮಾನವ ಜೀವನಕ್ಕೆ ಆಧಾರವಾದದ್ದು ಅದನ್ನು ಸ್ಥಿರವಾಗಿ ದೃಢವಾಗಿ ನಿಲ್ಲಿಸಬಲ್ಲಂಥದ್ದು ಧರ್ಮವೇ ಎಂದು ಇವರು ನಂಬಿದ್ದರಿಂದ ಇವರ ಧಾರ್ಮಿಕ ಬೋಧನೆಗಳಲ್ಲಿ ಗಾಢವಾದ ಜೀವನ ನಿಷ್ಠೆಯಿದೆ. 'ಮಾನವಜನ್ಮ ದೊಡ್ಡದು ಇದ ಹಾನಿ ಮಾಡಲು ಬೇಡ ಹುಚ್ಚಪ್ಪಗಳಿರಾ!' ಎಂಬಂಥ ನಿಲುವು ಹರಿದಾಸರದು. ಪುರಂದರದಾಸರು ಮತ್ತು ಕನಕದಾಸರು ರಚಿಸಿದ ಸಾಹಿತ್ಯವೆಲ್ಲ ಮಾನವಾನುಕಂಪ-ದಿಂದ ಕೂಡಿ ಸಮಾಜಸುಧಾರಣೆಗಾಗಿ ಲೋಕದ ಕೊಂಕುಡೊಂಕುಗಳನ್ನು ಖಂಡಿಸುವ ಸಾತ್ವಿಕ ಕ್ರೋಧ ನಗೆ-ವಿಡಂಬನೆಗಳ ಮೂಲಕ ದೋಷಗಳನ್ನು ಉಪಾಯವಾಗಿ ನಿವಾರಿಸುವ ಜಾಣ್ಮೆ, ಉದಾತ್ತವಾದದ್ದನ್ನು ಭವ್ಯವಾಗಿ ಅಭಿವ್ಯಕ್ತಿಸುವ ಸಾಮರ್ಥ್ಯಗಳನ್ನೆಲ್ಲ ಕಾಣಬಹುದು.

ಪುರಂದರದಾಸರು ಮತ್ತು ಕನಕದಾಸರು ಸಂಸ್ಕೃತದಲ್ಲಿ ತಮ್ಮ ವಿದ್ವತ್ತಿಗೆ ಮೂಲವಾದ ಉದ್ಗ್ರಂಥಗಳನ್ನು ರಚಿಸಬಲ್ಲವರಾಗಿದ್ದರೂ ತಮ್ಮ ಪ್ರಗಲ್ಭ ಪಾಂಡಿತ್ಯ ಲೋಕಾನುಭವಗಳನ್ನೆಲ್ಲ ಜನರಿಗಾಗಿ ಜನರ ಭಾಷೆಯಲ್ಲಿ ಧಾರೆಯೆರೆದರು. ಪಾಂಡಿತ್ಯ

ಅನುಭವಗಳ ಹಿನ್ನೆಲೆಯಿಂದಾಗಿ ಆಡುಭಾಷೆಯ ಜೀವಂತಿಕೆಯಿಂದಾಗಿ ಇವರು ಹಾಕಿದ್ದೆಲ್ಲಾ ಸಾಹಿತ್ಯವಾಯಿತು. ಕಾವ್ಯವಾಯಿತು, ಕೇಳುಗರನ್ನು ಸೆರೆ ಹಿಡಿಯಿತು. ಕ್ರಾಂತಿಯನ್ನೆ ರೂಪಿಸಿತು. ಅದೊಂದು ವೈಚಾರಿಕ ಕ್ರಾಂತಿ.

ಇವರೀರ್ವರು ಮುಖ್ಯವಾಗಿ ಭಕ್ತಿಮಾರ್ಗದಲ್ಲಿ ನಡೆದವರು; ಆ ಮಾರ್ಗದಲ್ಲಿ ನಡೆಯುವಂತೆ ಕರೆಕೊಟ್ಟವರು. ಭಕ್ತಿಯ ಮುಖ್ಯಾದ ಲಕ್ಷಣವೆಂದರೆ ಭಕ್ತಿ. ಭಕ್ತಿಪಂಥದ ಮುಖ್ಯ ಲಕ್ಷಣವೆಂದರೆ ಪ್ರೀತಿ ಆರಾಧನೆ. ಅಮೃತಸ್ವರೂಪನಾದ ಭಗವಂತನಲ್ಲಿ ಉತ್ಕಟವಾದ ಪ್ರೇಮವೇ ಭಕ್ತಿ ಎಂಬುದು ನಾರದ ಭಕ್ತಿ ಸೂತ್ರದ ಹೇಳಿಕೆ. ಈಶ್ವರನಲ್ಲಿ ಅತ್ಯಂತ ಹೆಚ್ಚಿನ ಅನುರಕ್ತಿಯೇ ಭಕ್ತಿ ಎಂದಿದ್ದಾನೆ ಶಾಂಡಿಲ್ಯ. ತನ್ನನ್ನು ತಾನು ಮರೆಯುವಂಥ ಸ್ವಾರ್ಥವನ್ನು ಎಣಿಸದಂಥ ಪ್ರೇಮವೇ ಭಕ್ತಿ ಎಂಬುದು ಭಾಗವತದ ವಿವರಣೆ ಉತ್ಕೃಷ್ಟವಾದ ಪ್ರೀತಿಯೇ ಭಕ್ತಿಯೆಂಬುದು ರಾಮಾಯಣದ ಮಾತು. ಅನುಗಾಲವೂ ಸ್ನೇಹಪೂರ್ವಕವಾಗಿ ಧ್ಯಾನ ಮಾಡುವುದೇ ಭಕ್ತಿಯೆಂದು ರಾಮಾನುಜರು ಹೇಳಿದ್ದಾರೆ. ದೇವರ ಮಹಿಮೆಯನ್ನರಿತು ಎಲ್ಲಕ್ಕಿಂತಲೂ ಹೆಚ್ಚಾಗಿ ಅವನನ್ನು ಪ್ರೀತಿಸುವುದೂ ಮುಕ್ತಿಯನ್ನು ದೊರಕಿಸಿಕೊಡತಕ್ಕದ್ದು. ಇದೊಂದೇ ಎಂಬುದಾಗಿ ನಂಬುವುದೂ ಭಕ್ತಿ ಎಂಬುದು ಮಧ್ವರ ಮತ. ಪರಮಾತ್ಮ ನಿರಾಕಾರ ನಿರ್ಗುಣ ಎಂಬ ಭಾವನೆಗಿಂತ, ಪರಮಪುರುಷನಲ್ಲಿ ನಂಬಿಕೆ ಪ್ರೀತಿಗಳನ್ನು ವ್ಯಕ್ತ ಪಡಿಸುವುದೆ ಅವನನ್ನು ಆರಾಧಿಸುವುದೇ ಭಕ್ತಿಯ ಮುಖ್ಯ ಲಕ್ಷಣ. ದೇವರು ಕರುಣಾವಾರಿಧಿ; ಅವನನ್ನು ಪ್ರೀತಿಸುವುದರಲ್ಲೇ ನಮಗೆ ಶ್ರೇಯಸ್ಸು ಎಂಬ ಭಾವದ ತಳಹದಿಯ ಮೇಲೆ ರಚಿತವಾದ ಪುರಂದರದಾಸ ಮತ್ತು ಕನಕದಾಸರ ಸಾಹಿತ್ಯ ಕಾವ್ಯಮಯವಾಯಿತು.

ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಗಳ ರಚನೆಗೆ ಮೂಲಪ್ರೇರಣೆ ಭಕ್ತಿ ಎಂಬುದಂತೂ ನಿರ್ವಿವಾದ. ಇದು ವಿಷ್ಣುಭಕ್ತಿಯೇ, ದ್ವೈತ ದೃಷ್ಟಿಯದೇ ಎಂಬ ಪ್ರಶ್ನೆಗಿಂತ ಮಿಗಿಲಾಗಿ ಭಕ್ತಿಯೆಂಬುದು ಮುಖ್ಯವಾಗಿದೆ. ಆರ್ಯರ ಆಗಮನದೊಂದಿಗೆ ಬಂದ ವೇದ ಉಪನಿಷತ್ತುಗಳಿಗೂ ಹಿಂದೆಯೇ ಭಕ್ತಿಪಂಥ ಭಾರತದಲ್ಲಿ ಇತ್ತೆಂದು ಕಾಣುತ್ತದೆ. ಪದ್ಮಪುರಾಣದ ಪ್ರಕಾರ ಭಕ್ತಿ, ದ್ರಾವಿಡ ನಾಡಿನಲ್ಲಿ ಜನಿಸಿ ಬೆಳೆಯಿತು. ವೇದ-ಉಪನಿಷತ್ತುಗಳನ್ನು ಅಭ್ಯಸಿಸುತ್ತಿದ್ದವರಲ್ಲಿ ಕೆಲವರಿಗೆ ಭಕ್ತಿಪಂಥದ ಬಗ್ಗೆ ತಾತ್ಸಾರವಿತ್ತು. ವೇದೋಕ್ತವಾದ ಯಜ್ಞ ಯಾಗಾದಿಗಳ ವಿಚಾರದಲ್ಲಿ ಭಕ್ತಿಪಂಥಕ್ಕೆ ಅಷ್ಟೇನೂ ಗೌರವವಿಲ್ಲದಿದ್ದುದು ಕಾರಣ. ಹರಿದಾಸರಲ್ಲಿ ಕೆಲವರಾದರೂ ಬ್ರಾಹ್ಮಣರಲ್ಲ.

ಕ್ರಮೇಣ ಭಕ್ತಿಪಂಥ ಜನಪ್ರಿಯವಾದಾಗ ವೇದಾಭ್ಯಾಸ ನಿಂತರೂ ಇದನ್ನು ಪುರಸ್ಕರಿಸಿ ತಮ್ಮದಾಗಿ ಮಾಡಿಕೊಂಡಾಗ ಭಕ್ತಿಪಂಥಕ್ಕೆ ಒಂದು ಗೌರವದ ಸ್ಥಾನ ಲಭಿಸಿತು. ದಾಸರ ಆಗಮನಕ್ಕೂ ಬಹಳ ಹಿಂದೆಯೇ ಈ ಪರಿವರ್ತನೆ ಆಗಿತ್ತು.

ಆದರೆ ಭಕ್ತಿ ಒಂದಿಲ್ಲೊಂದು ರೂಪದಲ್ಲಿ ಮೂರುಸಾವಿರ ವರ್ಷಗಳಿಗೂ ಹಿಂದಿನಿಂದಲೂ ಬೆಳೆದುಕೊಂಡು ಬಂದಿರುವುದಂತೂ ನಿಜ. ಡಾ. ಕೆ.ಸಿ. ವರದಾಚಾರಿ–ಯವರು ತಮ್ಮ 'ಆಸ್ಪೆಕ್ಟ್ಸ್ ಆಫ್ ಭಕ್ತಿ' ಎಂಬ ಪುಸ್ತಕದಲ್ಲಿ ಭಕ್ತಿಯ ಇತಿಹಾಸವನ್ನು ಮೂರು ಅವಧಿಗಳಾಗಿ ವಿಂಗಡಿಸುತ್ತಾರೆ. ಪ್ರತಿಯೊಂದು ಅವಧಿಯಲ್ಲಿ ಸಲ ಮೂರು ಒಂದು ಸಾವಿರ ವರ್ಷಗಳಷ್ಟು ವಿಸ್ತಾರವಾದದ್ದು. ಇತಿಹಾಸ ಪೂರ್ವ ಕಾಲದಲ್ಲಿ ಜಡವಸ್ತುಗಳಿಗೂ ಪ್ರಕೃತಿ ವ್ಯಾಪಾರಗಳಿಗೂ ಚೇತನವನ್ನಾರೋಪಿಸುವ ವಾಡಿಕೆ ಬೆಳೆದಿತ್ತು. ಈ ಪ್ರವೃತ್ತಿಯನ್ನು ಋಗ್ವೇದ ಎದುರಿಸಿತು. ಎಲ್ಲ ಪ್ರಕೃತಿ ವ್ಯಾಪಾರಗಳ ಹಿಂದಿನ ಏಕಚೇತನವನ್ನು ಗುರುತಿಸುವ ಪ್ರಯತ್ನ ಋಗ್ವೇದದಲ್ಲಿ ನಡೆಯಿತು. ಪ್ರಾರ್ಥನೆಯ ಮೂಲಕ ಆ ಮಹಾಚೇತನದೊಂದಿಗೆ ಕೊಡುವ ಹಂಬಲ ಅಲ್ಲಿ ಪ್ರಕಟವಾಯಿತು. ಅದರ ವಿವಿಧ ಮುಖಗಳಾದ ದೇವತೆಗಳನ್ನು ಸುಪ್ರೀತರನ್ನಾಗಿ ಮಾಡುವುದಕ್ಕಾಗಿ ಯಜ್ಞ ಯಾಗಾದಿಗಳು ಅಗತ್ಯವೆನಿಸಿದವು. ಈ ಕರ್ಮವಿಧಿಗಳು ಕ್ರಮೇಣ ಬೆಳೆದು ಜನಸಾಮಾನ್ಯರಿಗೆ ಅರ್ಥವಾಗದ ಸ್ಥಿತಿಯನ್ನು ಮುಟ್ಟಿದುವು. ತತ್ಫಲವಾಗಿ ಅತೃಪ್ತಿ ಹುಟ್ಟಿತು. ಮಹಾಭಾರತದಲ್ಲಿ ಇದು ವಿಶಿಷ್ಟವಾದ ರೀತಿಯಲ್ಲಿ ವ್ಯಕ್ತವಾಗಿದೆ. ಸರಿಯಾದ ವೈದಿಕ ದೃಷ್ಟಿಯನ್ನು ಗುರುತಿಸುವ ಪ್ರಯತ್ನ ನಡೆದಿದೆ. ಭಗವದ್ಗೀತೆಯಲ್ಲಿ ಯಜ್ಞಕ್ಕೆ ವಿಶಿಷ್ಟವಾದ ವ್ಯಾಖ್ಯೆ ಪ್ರಾಪ್ತವಾಯಿತು. ಜ್ಞಾನಯೋಗ, ಜ್ಞಾನಯಜ್ಞ ಎಂಬ ಮಾತುಗಳು ಪ್ರಧಾನವಾದವು. ಜ್ಞಾನದ ಅಸ್ತಿಭಾರದ ಮೇಲೆ ಪರಮಾತ್ಮನನ್ನು ಪ್ರೀತಿಸುವ ಭಕ್ತಿಗೆ ಪ್ರಾಧಾನ್ಯ ಒಂದು. ಅನಂತರ ಆಚಾರ್ಯರು ಜ್ಞಾನಕ್ಕೆ ಸೊಡರೆತ್ತಿದ್ದಾರೆ. ರಾಮಾನುಜರೂ ಮಧ್ವರೂ ಜ್ಞಾನದ ಪೀಠದ ಮೇಲೆಯೇ ಭಕ್ತಿಯನ್ನು ಕೂರಿಸಿ ಅದಕ್ಕೆ ಪೂಜೆ ಸಲ್ಲಿಸಿದ್ದಾರೆ.

ಯಜ್ಞಯಾಗಾದಿಗಳ ಅಂಧಾಚಾರಣೆಯ ವಿರುದ್ಧ ನಡೆಸಿದ ಪ್ರತಿಭಟನೆಯ ಪ್ರತೀಕವಾಗಿ ಬೌದ್ಧ, ಜೈನ ಧರ್ಮಗಳು ಹುಟ್ಟಿಕೊಂಡುವಾದರೂ ಕ್ರಮೇಣ ಆ ಮತಗಳ ಅನುಯಾಯಿಗಳೂ ಮೂಲ ಸೆಲೆಯನ್ನು ಮರೆತು ದೂರ ಸರಿದಿದ್ದರಿಂದ ಜ್ಞಾನಾಧಾರಿತ ಭಕ್ತಿಯ ಪಾರಮ್ಯವನ್ನು ಎತ್ತಿ ಹಿಡಿಯುವ ವೈದಿಕ ಧರ್ಮದ ಪುನರುಜ್ಜೀವನವಾಯಿತು. ಆ ಕಾಲದಲ್ಲೇ ಶಂಕರ, ರಾಮಾನುಜ, ಮಧ್ವರು ಬಂದದ್ದು ಶಂಕರರು ಅದ್ವೈತಿ–

ಗಳಾದರೂ ಭಕ್ತಿಪರವಶರಾಗಿ ಗೀತಗಳನ್ನು ಹಾಡಿದ್ದಾರೆ. ರಾಮಾನುಜ, ಮಧ್ವರ ಆಗಮನಕ್ಕೆ ಮುಂಚೆ. ಹಿಂದೆ ಹೇಳಿದ ಶೈವ, ವೈಷ್ಣವ ಭಕ್ತರನೇಕರು ವೈದಿಕ ಧರ್ಮದ ಮೂಲತತ್ತ್ವಗಳನ್ನು ಜನರ ಮಾತಿನಲ್ಲಿ ಹಾಡುಗಳ ರೂಪದಲ್ಲಿ ಜನರ ಬಳಿಗೆ ಕೊಂಡೊಯ್ದರು. ಅವರಿಗೆ ದೇವರು ನಿರಾಕಾರನಲ್ಲ. ಬಲುದೂರದವನೂ ಅಲ್ಲ. ಇವರು ದೇವರನ್ನು ಜನರ ನಡುವೆ ಮೆರೆಯಿಸಿದರು. ತಮ್ಮ ಮಾತುಗಳನ್ನೇ ದೇವರ ಬಾಯಿಂದ ಆಡಿಸಿದರು. ಈ ಸಂತರ ಸಂಪರ್ಕದಲ್ಲಿ ದೇವರು ನೆರೆಮನೆಯವನಂತೆ ಪರಿಚಿತನಾದ. ಅವನು ಮಗುವಾದ, ತಂದೆಯಾದ, ಗುರುವಾದ, ಸುಂದರ ತರುಣಿಯನ್ನು ಪ್ರೀತಿಸಿ ಮದುವೆಯಾದ, ಅಳಿಯನಾದ ಹೀಗೆ ಭಕ್ತಿಯ ನವುರಾದ ರೇಷ್ಮೆಯ ದಾರದಿಂದ ದೇವರು ಭಕ್ತರಿಂದ ಬಂಧಿತನಾದ. ಅವರ ಹಾಡಿನ ತಾಳಕ್ಕೆ ತಕ್ಕ ಹಾಗೆ ಕುಣಿದ. ಹೀಗೆ ಭಕ್ತಿ ಒಂದು ಮಹಾಪೂರವಾಗಿ ಭಾರತದ ಎಲ್ಲ ಭಾಗಗಳಲ್ಲೂ ಹರಿಯಿತು. ಕರ್ನಾಟಕದ ಹರಿದಾಸರು ಈ ಮಹಾಪೂರವನ್ನು ಕರ್ನಾಟಕದಲ್ಲಿ ಹರಿಯಿಸಿದರು. ಅಷ್ಟೇ ಅಲ್ಲ, ಕರ್ನಾಟಕ ಸಂಗೀತಕ್ಕೆ ರಾಜಮಾರ್ಗವನ್ನೂ ನಿರ್ಮಿಸಿದರು ಸಾಹಿತ್ಯವನ್ನು ಸಮೃದ್ಧಿಗೊಳಿಸಿದರು. ಇವರ ನಂತರದ ಮೂರನೆಯ ಅವಧಿಯೇ ಆಧುನಿಕ ಕಾಲ. ರಾಮಕೃಷ್ಣ, ಅರವಿಂದ, ರವೀಂದ್ರ, ಗಾಂಧಿ ಇವರು ಭಕ್ತಿಗೆ ಹೊಸ ಆಯಾಮವನ್ನೇ ನೀಡಿದರು.

ಇಂತಹ ಭಕ್ತಿಮಾರ್ಗದ ಮೂಲಕ ಕೀರ್ತನೆ ರಚಿಸಿ ತಮ್ಮ ಮನದ ಭಾವನೆಗಳನ್ನು ಹಾಡುಗಳಲ್ಲಿ ಹರಿಯಿಸಿ ತನ್ಮಯತೆಯಿಂದ ದೇವರನ್ನು ಭಜಿಸಿ ಒಲಿಸಿಕೊಳ್ಳಬಹುದೆಂಬುದನ್ನು ತೋರಿಸಿಕೊಟ್ಟ ಪುರಂದರ, ಕನಕದಾಸಾದಿಗಳು ನಮ್ಮ ಕನ್ನಡನಾಡಿನಲ್ಲೂ ಇನ್ನು ಹಲವಾರು ನಾಡಿನ ಇತರ ಭಾಗಗಳಲ್ಲೂ ಜನತೆಯನ್ನು ಭಕ್ತಿಮಾರ್ಗದಲ್ಲಿ ನಡೆಸಿ ಮೋಕ್ಷ ಸಾಧನೆಯ ಸುಲಭೋಪಾಯವನ್ನು ಬೋಧಿಸಿದ್ದಾರೆ. ಆ ದಾಸ ಪರಂಪರೆಯಲ್ಲಿ ಅದೆಷ್ಟೋ ದಾಸರುಗಳು ಬಾಳಿ ಬೆಳಗಿ ತಮ್ಮ ಜೀವಿತದ ಅವಧಿಯಲ್ಲಿ ಹರಿಕಥೆ, ಉಪನ್ಯಾಸ, ಕೀರ್ತನೆಗಳ ರಚನೆಗಳ ಮೂಲಕ ಜನಮನವನ್ನು ಭಗವಂತನ ಕಡೆಗೆ ಹರಿಯಿಸಿರುವುದರಲ್ಲಿ ಸಫಲರಾಗಿದ್ದಾರೆ. ಅಷ್ಟೇ ಅಲ್ಲ ಸಂಗೀತಜ್ಞಾನವೂ ಅಗಾಧವಾಗಿದ್ದು ಇದಕ್ಕೆ ನಾನಾ ರಾಗ ಹಾಗೂ ವಿವಿಧ ತಾಳಗಳಲ್ಲಿ ಇವರು ರಚಿಸಿರುವ ಕೀರ್ತನೆಗಳೇ ಸಾಕ್ಷಿ. ಹಾಡುವವರನ್ನು ಕೇಳುವವರನ್ನು ತನ್ಮಯತೆಯ ಸಮಾಧಿಯಲ್ಲಿ ಮೈಮರೆಸುವ ಎಷ್ಟೋ ಹಾಡುಗಳು ನಮ್ಮ ಚಿತ್ತಭಿತ್ತಿಯಲ್ಲಿ ಅಚ್ಚೊತ್ತಿದಂತೆ ಉಳಿಯಬಲ್ಲ ಪ್ರಭಾವಶಾಲಿಗಳಾಗಿವೆ.

ಇಂತಹ ಮಹತ್ವದ ಕೀರ್ತನೆಗಳಲ್ಲಿ ಸಾಮಾಜಿಕ ವಿಡಂಬನೆಯೆಂಬ ವಸ್ತು ವಿಷಯ ಕುರಿತು ಮಾಡುತ್ತಿರುವ ಸಂಶೋಧನೆಗೆ ಪೂರಕವಾಗಿ ಅಧ್ಯಯನದ ಉದ್ದೇಶ ವ್ಯಾಪ್ತಿಯನ್ನು ಹೊರತುಪಡಿಸಿ ಮುಖ್ಯವಾಗಿ ನಾಲ್ಕು ಅಧ್ಯಾಯಗಳನ್ನು ಈ ಕೆಳಕಂಡಂತೆ ಮಾಡಿಕೊಳ್ಳಲಾಗಿದೆ. ಕನ್ನಡ ಸಾಹಿತ್ಯದಲ್ಲಿ ದಾಸಸಾಹಿತ್ಯದ ಪರಂಪರೆ, ಪುರಂದರ-ದಾಸರು ಹಾಗೂ ಕನಕದಾಸರ ಚಿತ್ರಣ, ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ವಿಡಂಬನೆಯು ತೌಲನಿಕ ಅಧ್ಯಯನ. ಪುರಂದರದಾಸ ಮತ್ತು ಕನಕದಾಸರ ಕೀರ್ತನೆಯಲ್ಲಿನ ಸಾಮಾಜಿಕ ವಿಡಂಬನೆಯ ಪ್ರಸ್ತುತತೆ. ಇವುಗಳ ಜೊತೆಗೆ ಉಪಸಂಹಾರ, ಅನುಬಂಧ, ಆಕರಗ್ರಂಥಗಳು, ಪರಾಮರ್ಶನ ಗ್ರಂಥಗಳ ಪಟ್ಟಿಯನ್ನು ನೀಡಲಾಗುತ್ತದೆ.

# ಅಧ್ಯಾಯ ಎರಡು

# ಕನ್ನಡ ಸಾಹಿತ್ಯದಲ್ಲಿ ದಾಸ ಸಾಹಿತ್ಯದ ಪರಂಪರೆ

ಮಧ್ಯಕಾಲೀನ ಭಾರತದಲ್ಲಿನ ರಾಜಕೀಯ ಅರಾಜಕತೆ, ಧಾರ್ಮಿಕ ಮುಖಾಮುಖಿ, ಸಾಮಾಜಿಕ ಅರಾಜಕತೆಗಳ ಇಕ್ಕಟ್ಟಿನಲ್ಲಿ ಭಕ್ತಿಪಂಥ ಒಂದು ಚಳುವಳಿಯ ಸ್ವರೂಪದಲ್ಲಿ ಬಹುತೇಕ ಭಾರತಾದ್ಯಂತ ವ್ಯಾಪಿಸಿತು. ಹತ್ತನೆಯ ಶತಮಾನಕ್ಕಾಗಲೆ ತಮಿಳುನಾಡಿನಲ್ಲಿ ನಾಯನ್ಮಾರರು ಮತ್ತು ಆಳ್ವಾರರು ಈ ಅನುಭವಿ ಪರಂಪರೆಯ ಹರಿಕಾರರಾಗಿ ಹರಿ–ಹರ ಭಕ್ತಿಯನ್ನು ಸಾರಿದರು. ತಮಿಳುನಾಡಿನಲ್ಲಿ ನಡೆದ ಈ ಭಕ್ತಿ ಚಳುವಳಿಯ ಪ್ರಕ್ರಿಯೆ, ವಿಭಿನ್ನ ಕಾಲಘಟ್ಟದಲ್ಲಿ ಕರ್ನಾಟಕದಲ್ಲಿ ಕಾಣಿಸಿಕೊಂಡಿತ್ತು. ಅದು ಹನ್ನೆರಡನೆಯ ಶತಮಾನದ ಶಿವಶರಣರ ಹರಭಕ್ತಿ ಹಾಗೂ ಹದಿನೈದನೆಯ ಶತಮಾನದಲ್ಲಿ ಆರಂಭವಾದ ಹರಿದಾಸರ ಕೃಷ್ಣಭಕ್ತಿಯ ಚಳುವಳಿಗಳು. ಮಹಾರಾಷ್ಟ್ರದಲ್ಲಿ ನಾಮದೇವ, ಜ್ಞಾನೇಶ್ವರ, ತುಕಾರಾಮ, ಗುಜರಾತಿನಲ್ಲಿ ನರಸಿ ಮೆಹತಾ, ರಾಜಸ್ಥಾನದಲ್ಲಿ ಮೀರಾಬಾಯಿ, ಉತ್ತರ ಪ್ರದೇಶದಲ್ಲಿ ಕಬೀರ್, ಸೂರ್‌ದಾಸ್, ತುಳಸಿದಾಸ್, ಪಂಜಾಬಿನಲ್ಲಿ ಗುರುನಾನಕ್, ಬಂಗಾಳದಲ್ಲಿ ಚೈತನ್ಯ ಆಂಧ್ರದಲ್ಲಿ ಅನ್ನಮಾಚಾರ್ಯ, ತ್ಯಾಗರಾಜ, ಉತ್ಕಲದಲ್ಲಿ ಜಗನ್ನಾಥದಾಸ್, ಅನಂತದಾಸ ಮೊದಲಾದವರು ತತ್ವಶಾಸ್ತ್ರದ ಕಗ್ಗಂಟಿನಲ್ಲಿ ಬಿಗಿಬಿದ್ದ ವೈದಿಕ ಧರ್ಮಕ್ಕೆ ಭಕ್ತಿಯ ಅನುಸಂಧಾನದ ಮೂಲಕ ಹೊಸ ಚಾಲನೆಯನ್ನು ನೀಡಿದರು. ಆಧ್ಯಾತ್ಮಿಕಕ್ಕೆ ಹೊಸ ಪರಿಭಾಷೆಯನ್ನು ಕಟ್ಟಿದರು. ಈ ಬಹುರೂಪಿ ಭಕ್ತಿಪಂಥಗಳು ಇದು ಅದರಿಂದ, ಅದು ಇದರಿಂದ ಪ್ರೇರಣೆ–ಪ್ರಭಾವ ಪಡೆಯಿತು ಎನ್ನುವ ನೆಲೆಯನ್ನು ಮೀರಿ ತಮ್ಮ – ತಮ್ಮ ಸ್ವಂತಿಕೆಯ ಕವಲನ್ನು ಪಡೆದವು. ಆದರೂ ಶಿವಶರಣ ಚಳುವಳಿಯ ಬೆನ್ನಿಗಿದ್ದ ತಮಿಳುನಾಡಿನ ನಾಯನ್ಮಾರ್ ಭಕ್ತಿಪಂಥ ಹಾಗೂ ಹರಿದಾಸ ಆಂದೋಲನದ ಹಿಂದಿನ ಶರಣ ಭಕ್ತಿಪಂಥದ ಮಾದರಿಯನ್ನು ನಾವು ಮರೆಯುವಂತಿಲ್ಲ.

ಈ ಪೈಕಿ ಮಧ್ವಾಚಾರ್ಯರ ನೇರ ಶಿಷ್ಯರು ನಾಲ್ಕು ಮಂದಿ. ಪದ್ಮನಾಭತೀರ್ಥರು, ಅಕ್ಷೋಭ್ಯತೀರ್ಥರು, ಮಾಧವತೀರ್ಥರು ಮತ್ತು ನರಹರಿತೀರ್ಥರು. ಈ ನಾಲ್ವರೂ ಮೊದಲು ಶ್ರೀಶಂಕರಾಚಾರ್ಯರ ಅದ್ವೈತ ತತ್ವಕ್ಕೆ ಮಾರುಹೋಗಿ ಅವರನ್ನು ಗುರುಗಳೆಂದು ಒಪ್ಪಿಕೊಂಡಿದ್ದವರು. ಮಧ್ವಾಚಾರ್ಯರೊಡನೆ ವಾದಮಾಡಿ ಸೋತು, ಬಳಿಕ ಅವರ ಶಿಷ್ಯರಾಗಿ ಮಧ್ವತತ್ವವನ್ನು ಒಪ್ಪಿಕೊಂಡವರು. ಹಾಗೆ ಶಿಷ್ಯರಾದ ಪದ್ಮನಾಭತೀರ್ಥರ ಪೀಳಿಗೆಯಲ್ಲಿ ಎಂಟನೆಯ ಮಠಾಧಿಪತಿಗಳಾಗಿ ಅಧಿಕಾರ

ವಹಿಸಿಕೊಂಡವರು ಕನ್ನಡಿಗರೇ ಆದ ಶ್ರೀಪಾದರಾಜರು. ತಮಿಳುನಾಡಿನ ಶ್ರೀರಂಗದಲ್ಲಿ ಮಠದ ಅಧಿಕಾರ ವಹಿಸಿಕೊಂಡ ಅವರು ಕೆಲವು ಕಾಲ ಅಲ್ಲಿಯೇ ಇದ್ದು, ಬಳಿಕ ಕೋಲಾರದ ಬಳಿಯ ಮುಳುಬಾಗಿಲಿಗೆ ಬಂದು ಅಲ್ಲಿ ನೆಲೆಸಿದರು. ಅಲ್ಲಿ ಶ್ರೀಪಾದರಾಜರು ನಿತ್ಯಪೂಜೆಯ ಸಮಯದಲ್ಲಿ ತಮ್ಮ ತಾಯ್ನುಡಿ ಕನ್ನಡ ಭಾಷೆಯಲ್ಲಿ ಚಿಕ್ಕ-ಚಿಕ್ಕ ಸ್ತುತಿಗೀತೆಗಳನ್ನು ರಚಿಸಿ ಹಾಡುತ್ತಿದ್ದರು. 'ರಂಗವಿಠಲ' ಅಂಕಿತದಲ್ಲಿ ಶ್ರೀಪಾದರಾಜರು ಹಾಡುತ್ತಿದ್ದ ಆ ಹಾಡುಗಳೇ ಹರಿದಾಸ ಸಾಹಿತ್ಯದ ಮೊದಲ ಕೀರ್ತನೆಗಳು ಶ್ರೀಪಾದರಾಜರೇ ಮೊದಲ ಕೀರ್ತನಕಾರರು.

ಶ್ರೀಪಾದರಾಜರ ಶಿಷ್ಯರು ಶ್ರೀವ್ಯಾಸರಾಯರು, ವಿಜಯನಗರದ ಶ್ರೀಕೃಷ್ಣದೇವ-ರಾಯನ ಆಸ್ಥಾನದಲ್ಲಿ ರಾಜಗುರುಗಳಾಗಿದ್ದವರು. ಸಂಸ್ಕೃತದಲ್ಲಿ ಘನವಿದ್ವಾಂಸ-ರಾಗಿದ್ದರೂ ಮಾತೃಭಾಷೆ ಕನ್ನಡದಲ್ಲಿ ಗುರುಗಳನ್ನ ಅನುಸರಿಸಿ ಅನೇಕ ಹಾಡುಗಳನ್ನು ರಚಿಸಿದರು. 'ಕೃಷ್ಣ' ಅಥವಾ 'ಶ್ರೀಕೃಷ್ಣ' ವ್ಯಾಸರಾಯರ ಅಂಕಿತ. ವ್ಯಾಸರಾಯರ ಶಿಷ್ಯರೇ ಪುರಂದರದಾಸರು, ಕನಕದಾಸರು ಮತ್ತು ವಾದಿರಾಜರು. ಪುರಂದರ-ಕನಕರು ಹರಿದಾಸರು. ಸಂಸಾರದಲ್ಲಿದ್ದೂ ವೈರಾಗ್ಯವನ್ನು ಬಯಸಿ ಅತಿಮೋಹವನ್ನು ತ್ಯಜಿಸಿದವರು. ವಾದಿರಾಜರು ಸನ್ಯಾಸಿಗಳು ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಈ ಮೂವರೂ ಯತಿಗಳೂ. ಇವರು ಹರಿದಾಸ ಪರಂಪರೆಯಲ್ಲಿ 'ಯತಿತ್ರಯರೆಂದೇ ಪ್ರಸಿದ್ಧರಾದವರು. ಇವರೆಲ್ಲರೂ ತಮ್ಮ ಮೌಲಿಕ ರಚನೆಗಳಿಂದ ಹರಿದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

ಶ್ರೀಪಾದರಾಜರು ನೆಟ್ಟ ಹರಿದಾಸ ಸಾಹಿತ್ಯದ ಬೀಜ ಶ್ರೀವ್ಯಾಸರಾಯರ ಆರೈಕೆಯಿಂದ ಮೊಳಕೆಯೊಡೆದು, ಶ್ರೀವಾದಿರಾಜರ ಕೃಪಾಕಟಾಕ್ಷದಿಂದ ಶಾಖೋಪ-ಶಾಖೆಗಳಾಗಿ ಬೆಳೆಯುವ ವೇಳೆಗೆ ಸರಿಯಾಗಿ, ಪುರಂದರದಾಸರು ಮತ್ತು ಕನಕದಾಸರಂಥ ಪ್ರತಿಭಾಶಾಲಿಗಳು ಪ್ರವೇಶಿಸಿದರು. ಅನಂತರದಲ್ಲಿ ಹರಿದಾಸ ಸಾಹಿತ್ಯ ಕ್ಷೇತ್ರದಲ್ಲಿ ಸುಗ್ಗಿಯ ಹೊಸಫಸಲು ತುಂಬಿ ತುಳುಕಾಡತೊಡಗಿತು. ದಾಸಸಾಹಿತ್ಯದ ಸಂದರ್ಭದಲ್ಲಿ ಶ್ರೀಪಾದರಾಜರಿಂದ ವಿಜಯದಾಸರವರೆಗಿನ ಕಾಲಘಟ್ಟವನ್ನು ಹರಿದಾಸ ಸಾಹಿತ್ಯದ 'ಮೊದಲ ಘಟ್ಟ'ವೆಂದೂ 'ಸುವರ್ಣಯುಗ'ವೆಂದೂ ಕರೆಯುತ್ತಾರೆ. ಇವರ ನಂತರ ವಿಜಯದಾಸರು, ಗೋಪಾಲದಾಸರು, ರಾಮದಾಸರು, ಗುರುಗೋವಿಂದ, ವಿಠಲದಾಸರುಗಳೇ ಮೊದಲಾದವರಿಂದ ಮುಂದುವರಿದು, ಇಂದಿಗೂ ಜೀವಂತವಾಗಿದೆ. ಹದಿನೈದನೆಯ ಶತಮಾನದ ಶ್ರೀಪಾದರಾಜರು 'ರಂಗವಿಠಲ' ಅಂಕಿತದಿಂದ ಕೃತಿ ರಚಿಸಿದಂತೆ ಎಲ್ಲ ಹರಿದಾಸರೂ ಅವರವರ ಇಷ್ಟದೈವದ ಹೆಸರಾದ ಪುರಂದರ ವಿಠಲ,

ಆದಿಕೇಶವ, ಹಯವದನ, ವಿಜಯವಿಠಲ, ಗೋಪಾಲವಿಠಲ ಇತ್ಯಾದಿಗಳನ್ನು ಅಂಕಿತವಾಗಿ ಇಟ್ಟುಕೊಂಡು ಸಾವಿರಾರು ಸಂಖ್ಯೆಯಲ್ಲಿ ಕೀರ್ತನೆ ಸುಳಾದಿ, ಉಗಾಭೋಗಾದಿಗಳನ್ನು ರಚಿಸಿ ಹಾಡಿದ್ದಾರೆ. ಅವೆಲ್ಲವನ್ನೂ ಒಟ್ಟಾಗಿ 'ಕೀರ್ತನೆಗಳು', 'ಪದಗಳು' ಎಂದೂ ಈ ವೈಷ್ಣವ ಸಂತರ ಪರಂಪರೆಯನ್ನು 'ಕರ್ನಾಟಕದ ಹರಿದಾಸರು' ಎಂದೂ ಕರೆಯಲಾಗಿದೆ. ಅವರೆಲ್ಲರ ಮುಖ್ಯ ಉದ್ದೇಶ, ಮೂಲಗುರಿ ಆತ್ಮೋನ್ನತಿ, ಬಳಿಕ ಸಮಾಜದಲ್ಲಿಯ ಸಾಮಾನ್ಯ ಜನರ ಬದುಕನ್ನು ಉತ್ತಮಪಡಿಸುವುದು. ಈ ಗುರಿಸಾಧನೆ ಶ್ರೀಮಧ್ವಾಚಾರ್ಯರ ತತ್ತ್ವಗಳ ಹಾಗೂ ಸಂಗೀತದ ಹಿನ್ನೆಲೆಯಲ್ಲಿ ಸಮರ್ಪಕವಾಗಿ, ಪರಿಣಾಮಕಾರಿಯಾಗಿ ನಡೆದಿದೆ.

ಹರಿದಾಸರ ಈ ಅಗಾಧ ಗಾತ್ರದ ಸಾಹಿತ್ಯದಿಂದ ಕನ್ನಡ ವಾಙ್ಮಯ ಶ್ರೀಮಂತವಾಗಿದೆ. ಆ ಸಾಹಿತ್ಯವಾದರೂ ಹರಿಭಕ್ತಿಯಿಂದ ಕೂಡಿದ ಅನುಭವ ಸಾಹಿತ್ಯ, ಜೀವನಾನುಭವದಿಂದ ಹೊಮ್ಮಿದ ಸಂಗೀತವನ್ನು ಬೆರಸಿ ಹೇಳಿದ ಸಾಹಿತ್ಯ ಪ್ರಾಸಾನುಪ್ರಾಸಗಳಿಂದ ಕೂಡಿದ ಉಪಮೆ, ರೂಪಕ ಮತ್ತು ಸಹಜೋಕ್ತಿಯುಕ್ತ ಸಾಹಿತ್ಯ. ಕಾಂತ ಸಮ್ಮಿತದಂಥ ಹಿತವಾದ, ಆತ್ಮೀಯವಾದ, ಸರಳ ಸುಂದರವಾದ ಕನ್ನಡದ ಆಡುಮಾತುಗಳಿಂದ ಕೂಡಿದ, ತತ್ತ್ವಯುತ ಸತ್ತ್ವಭರಿತ ಸಾಹಿತ್ಯ. ಹೃದಯ ಮನಸ್ಸುಗಳನ್ನಪ್ಪುವ ನಡೆ-ನುಡಿಗಳನ್ನು ತಿದ್ದುವ ಸಾಮಾನ್ಯ ಜನರಿಗೂ ಅರ್ಥವಾಗುವ, ವೇದ್ಯವಾಗುವ, ಆ ಮೂಲಕ ದುಃಖತಪ್ತ ಮನಸುಗಳಿಗೆ, ಸಾಂತ್ವನವೀಯುವ ಸಾಹಿತ್ಯ. ಭಕ್ತಿ-ತತ್ವ-ಸಂಗೀತಗಳು ಹರಿದಾಸ ಸಾಹಿತ್ಯದಲ್ಲಿ ಮುಪ್ಪುರಿಗೊಂಡಿವೆ. ಇಹ-ಪರಗಳೆರಡನ್ನು ಏಕಕಾಲದಲ್ಲಿ ಮನಸ್ಸಿಗೆ ತಂದುಕೊಡುತ್ತವೆ. ಇಷ್ಟೆಲ್ಲ ಸಕಾರಾತ್ಮಕ ವಿಶೇಷಣಗಳನ್ನು ಪಡೆದುಕೊಳ್ಳಬಲ್ಲ, ತಡೆದುಕೊಳ್ಳಬಲ್ಲ ಶಕ್ತಿ ಹರಿದಾಸ ಸಾಹಿತ್ಯಕ್ಕೆ ಇದೆಯೆ? ಅದರ ಸ್ವರೂಪವೆಂಥದು? ಅದು ಹೇಳಿರುವುದಾದರು ಏನನ್ನು? ನಮ್ಮ ಬದುಕಿಗೆ ಅದರಿಂದ ಏನಾದರೂ ಪ್ರಯೋಜನವಿದೆಯೇ ಎಂಬುದನ್ನು ಮುಂದಿನ ಉಪ ಅಧ್ಯಾಯಗಳಲ್ಲಿ ಚರ್ಚಿಸಿದೆ.

### ೧.೧ ಉಗಮ ಮತ್ತು ವಿಕಾಸ

ದಾಸಸಾಹಿತ್ಯದ ಉಗಮಕ್ಕೆ ಅನೇಕ ಕಾರಣಗಳು ಮಾತ್ರವಲ್ಲದೆ ಹಲವರ ಪ್ರೇರಣೆ ಪ್ರಭಾವವೂ ಇದೆ. ಅವುಗಳನ್ನು ಮೊದಲು ಚರ್ಚಿಸಿ ನಂತರ ವಿಕಾಸದ ಬಗ್ಗೆ ಚರ್ಚಿಸಿದೆ.

**ದಾಸಸಾಹಿತ್ಯದ ಉಗಮಕ್ಕೆ ಪ್ರೇರಣೆ ಮತ್ತು ಪ್ರಭಾವಗಳು**

೧. ಶ್ರೀಪಾದರಾಜರು ಕನ್ನಡನಾಡಿನಲ್ಲಿ ಹುಟ್ಟಿ ಬೆಳೆದ ಕನ್ನಡಿಗರಾದ್ದರಿಂದ ಅವರಿಗಿದ್ದ ತಮ್ಮ ಮಾತೃಭಾಷೆಯ ಬಗೆಗಿನ ಅಭಿಮಾನ, ಪ್ರೀತಿ.

೨. ಕನ್ನಡಿಗರೇ ಆದ ಶಿವಶರಣರು ರಚಿಸಿದ್ದ ಕನ್ನಡ ವಚನಗಳ ನಿಕಟ ಪರಿಚಯ.

೩. ತಮ್ಮ ಗುರುಗಳಾದ ಸ್ವರ್ಣವರ್ಣತೀರ್ಥರೊಂದಿಗೆ ಅನೇಕ ವರ್ಷಗಳ ಕಾಲ ತಮಿಳುನಾಡಿನ ಶ್ರೀರಂಗದಲ್ಲಿ ನೆಲೆಸಿದ್ದು, ಅಲ್ಲಿ ತಮಿಳು ಕೃತಿಗಳು ಜನಸಾಮಾನ್ಯರ ಮೇಲೆ ಬೀರಿದ್ದ ಪ್ರಭಾವ ಪರಿಣಾಮಗಳನ್ನು ಕಣ್ಣಾರೆ ಕಂಡ ಅನುಭವ.

೪. ಜನಸಾಮಾನ್ಯರಲ್ಲಿದ್ದ ಭಕ್ತಿ, ಧರ್ಮ ತತ್ತ್ವಗಳನ್ನರಿಯುವ ಅದಮ್ಯ ಬಯಕೆಯನ್ನು ಪೂರೈಸುವ ಹೊಣೆ.

೫. ಧರ್ಮ ಹಾಗೂ ಜನತೆಯ ನಡುವೆ ಮಾತೃಭಾಷೆಯಲ್ಲಿ ಮಾತ್ರ ನೇರ ಸಂವಹನ, ಸಂಪರ್ಕ ಹಾಗೂ ಉದ್ದೇಶಿತ ಪರಿಣಾಮಗಳು ಸಾಧ್ಯವೆಂಬ ವಿಚಾರ ಜೈನ–ಬೌದ್ಧ ಧರ್ಮೀಯರಿಂದ ರಚಿತವಾದ ಪ್ರಾಕೃತ–ಪಾಳಿ ಭಾಷೆಯ ಕೃತಿಗಳ ಪರಿಣಾಮದಿಂದ ವೇದ್ಯ.

೬. ಶ್ರೀವೈಷ್ಣವ ಮತಾನುಯಾಯಿಗಳು ತಮ್ಮ ಮಾತೃಭಾಷೆಯಲ್ಲದ ಕನ್ನಡದಲ್ಲಿ ತತ್ವಪ್ರಸಾರ ಮಾಡಲಿಲ್ಲವಾದ್ದರಿಂದ ಒಂದು ಕಡೆ ಶಂಕರಾಚಾರ್ಯರ ಶೈವಧರ್ಮ, ಮತ್ತೊಂದೆಡೆ ವೈದಿಕ ಧರ್ಮವನ್ನು ನಿರಾಕರಿಸಿ ನಿಂತ ವೀರಶೈವಧರ್ಮಗಳ ನಡುವೆ ವೈಷ್ಣವ ಧರ್ಮವನ್ನು ಎತ್ತಿಹಿಡಿಯುವ ಅನಿವಾರ್ಯತೆ.

೭. ವೀರಶೈವಧರ್ಮದ ವಿಶಾಲ ಮನೋಭಾವದಿಂದ ತತ್ತರಿಸಿದ್ದ ವೈದಿಕರ ಸಾಂತ್ವನ.

೮. ಜನಸಾಮಾನ್ಯರ ತತ್ವ ತಿಳಿಯುವ ಸಂಸ್ಕೃತ ಪಂಡಿತರು ಈಡೇರಿಸದಿದ್ದ ಪರಿಸ್ಥಿತಿ.

೯. ಆಳರಸರ ಪರಸ್ಪರ ಕಿತ್ತಾಟ, ಅನ್ಯಧರ್ಮೀಯರ ಆಕ್ರಮಣದಿಂದಾಗಿ ಸೇನಾ ಅವಶ್ಯಕತೆಗಳ ಪೂರೈಕೆಗಾಗಿ ಜನಸಾಮಾನ್ಯರ ಮೇಲೆ ಹೇರಿದ್ದ ಹೆಚ್ಚಿನ ತೆರಿಗೆಗಳಿಂದ ದಿಕ್ಕು ತೋಚದಂತಾಗಿದ್ದ ಸಾಮಾನ್ಯ ಜನರ ಮನಃಶ್ಯಾಂತಿಯನ್ನು ಹರಿಭಕ್ತಿಯ ಮೂಲಕ ಮರಳಿ ಕೊಡುವ ಉದ್ದೇಶ.

೧೦. ಭಕ್ತಿಪೂರ್ವ ಭಾವಗೀತೆಯಾದ ಮಧ್ವಾಚಾರ್ಯರ ದ್ವಾದಶ ಸ್ತೋತ್ರ ದ್ವೈತಪರವಾದ ಹರಿಸ್ತುತಿಗೆ ಪ್ರೇರಕ ಶಕ್ತಿಯಾದದ್ದು.

೧೧. ಅದುವರೆಗೆ ಕರ್ನಾಟಕದಲ್ಲಿ ನೆಲೆಗೊಂಡಿದ್ದ ಯಾವ ಧರ್ಮವೂ ಜನತೆಯ ಸನ್ನಡತೆ ಸದಾಚಾರಗಳ ಸಂದರ್ಭದಲ್ಲಿ, ಉನ್ನತ ಮೌಲ್ಯಸ್ಥಾಪನೆಯಲ್ಲಿ ಪೂರ್ಣಯಶಸ್ಸು ಗಳಿಸದಿದ್ದುದು.

೧೨. ಇಸ್ಲಾಂ ಧರ್ಮದ ಆಕ್ರಮಣದ ಭಯದಿಂದ, ಜನತೆಯನ್ನು ಪಾರು ಮಾಡಿ ಅವರಿಗೆ ಶ್ರೀರಕ್ಷೆಯಾಗಿ ನಿಲ್ಲಬೇಕಾಗಿ ಬಂದ ತುರ್ತು ಪರಿಸ್ಥಿತಿ.

೧೩. ಸಮಕಾಲೀನ ಕನ್ನಡ ಕವಿಗಳಾದ ಕುಮಾರವ್ಯಾಸ, ಕುಮಾರ ವಾಲ್ಮೀಕಿಯ ಕನ್ನಡ ಮಹಾಭಾರತ, ರಾಮಾಯಣದಂಥ ಧಾರ್ಮಿಕ ಸಾಹಿತ್ಯ ರಚನೆ ಮಾಡಿದರು.

೧೪. ಇಸ್ಲಾಂ ಧರ್ಮದ ಭಯದ ನೆರಳಿನಲ್ಲಿ ನಿರಾಡಂಬರವಾದ, ಅಬ್ಬರವಿಲ್ಲದ, ಭಕ್ತಿಪಂಥಕ್ಕೆ ಮಾತ್ರ ಉಳಿಗಾಲವಿದ್ದ ಅಂದಿನ ಸಾಮಾಜಿಕ ಸ್ಥಿತಿ.

೧೫. ಮಹಾರಾಷ್ಟ್ರದ ವಾರಕಲೀ ಪಂಥದ **ಎಡಲೋಪಾಸನೆಯ** ಪ್ರಭಾವ.

೧೬. ಭಾರತದಾದ್ಯಂತ ಆಯಾ ದೇಶಭಾಷೆಯಲ್ಲಿ ಹುಟ್ಟಿಕೊಂಡ ಭಕ್ತಿ ಸಾಹಿತ್ಯ ಆ ಕಾಲದ ಕಾಲಧರ್ಮವಾಗಿದ್ದು.

೧೭. ಇವೆಲ್ಲಕ್ಕೂ ಹಿನ್ನೆಲೆಯಾಗಿ ಮಠಾಧಿಪತಿಗಳಾದ ಅವರಿಗಿದ್ದ ಹರಿಭಕ್ತಿ ಹಾಗೂ ದ್ವೈತ ತತ್ವಗಳ ಪ್ರಚಾರ-ಪ್ರಸಾರಗಳ ಪರಮೋದ್ದೇಶ.

೧೮. ಬಹುಶಃ ಅವರಿಗೂ ಹಿಂದೆ ರಚಿತವಾಗಿದ್ದಿರಬಹುದಾದ ಕನ್ನಡ ಕೀರ್ತನೆಗಳ ಸಿದ್ಧ ಮಾದರಿ.

ಈ ಎಲ್ಲಾ ಪ್ರೇರಣೆ ಪ್ರಭಾವದಿಂದ ದಾಸ ಸಾಹಿತ್ಯದ ಉಗಮವು ಶ್ರೀಪಾದರಾಜರಿಂದ ಮೊದಲುಗೊಂಡು ರಾಮದಾಸರ ತನಕ ಅಂದರೆ ಸುಮಾರು ೧೪೦೪ ರಿಂದ ೧೮ ನೆಯ ಶತಮಾನದವರೆಗೆ ವಿಕಾಸ ಹೊಂದಿರುವುದನ್ನು ಕಾಣುತ್ತೇವೆ.

**ಶ್ರೀಪಾದರಾಜರು (೧೪೦೪ – ೧೫೦೨)**

ಶ್ರೀಪಾದರಾಜರು ದೀಕ್ಷೆ ಪಡೆದ ತರುಣದಲ್ಲಿ ಗುರುಗಳಾದ ಸ್ವರ್ಣವರ್ಣರೊಂದಿಗೆ ತಮಿಳುನಾಡಿನ ಶ್ರೀರಂಗದಲ್ಲಿ ಕೆಲವು ಕಾಲ ಇದ್ದರು. ಅಲ್ಲಿ ನಾಯನ್ಮಾರರು ಮತ್ತು ಆಳ್ವಾರರು ತಮ್ಮ ಮಾತೃಭಾಷೆ ತಮಿಳಿನಲ್ಲಿ ಹರಿಭಕ್ತ ಪ್ರಸಾರ ಮಾಡಿದ್ದನ್ನೂ ಜನಸಾಮಾನ್ಯರ ಮೇಲೆ ಅದರ ಪ್ರಭಾವವನ್ನೂ ಇವರು ತಿಳಿದವರಾಗಿದ್ದರು. ಕರ್ನಾಟಕದಲ್ಲೇ ವಚನಕಾರರು ಸುಮಾರು ೩೦೦ ವರ್ಷಗಳ ಹಿಂದೆ ತಮ್ಮ

ಮಾತೃಭಾಷೆ ಕನ್ನಡದಲ್ಲಿ ಶಿವಭಕ್ತಿ ಹಾಗೂ ವೀರಶೈವ ಧರ್ಮಗಳನ್ನು ಜನರಿಗೆ ಬೋಧಿಸಿದ್ದ ಹಿನ್ನೆಲೆಯೂ ಇತ್ತು. ವಿಜಯನಗರದ ಅರಸರ ಕಾಲದ ಆಡಳಿತದಲ್ಲಿ ಅನ್ಯಧರ್ಮೀಯರ ಆಕ್ರಮಣದಿಂದಾಗಿ ಜನರ ದೈನಂದಿನ ಬದುಕು ಅತಂತ್ರವಾಗಿತ್ತು. ತೆರಿಗೆಗಳ ಭಾರದಿಂದ, ಬಲವಂತದ ಮತಾಂತರ, ಸುಲಿಗೆ-ಲೂಟಿ, ಅತ್ಯಾಚಾರಗಳಿಂದ, ಜನ ನೆಮ್ಮದಿ ಕಳೆದುಕೊಂಡು ತಲೆಯೆತ್ತದಂತಾಗಿದ್ದರು. ಇಂತಹ ಅನೇಕ ಒತ್ತಡ ಪ್ರೇರಣೆ ಪ್ರಭಾವಗಳ ಪರಿಣಾಮವಾಗಿ ಜನರ ಮನಸ್ಸಿಗೆ ಶಾಂತಿ, ಸಮಾಧಾನಗಳನ್ನು ನೀಡುವ ಸಲುವಾಗಿ ಶ್ರೀಪಾದರಾಜರ ವಿದ್ವತ್ತು, ಪಾಂಡಿತ್ಯಗಳು ಪುಟ್ಟ-ಪುಟ್ಟ ಕನ್ನಡ ಕೀರ್ತನೆಗಳ ರೂಪದಲ್ಲಿ ಹೊರಹೊಮ್ಮಿದವು. ಹೀಗೆ ಕನ್ನಡದಲ್ಲಿ ಹರಿದಾಸ ಸಾಹಿತ್ಯ ಉಗಮವಾಯಿತು. ಮಾಧ್ವ ತತ್ತ್ವಗಳ ಹಿನ್ನೆಲೆಯಲ್ಲಿ ಸಂಗೀತದ ಮಾಧ್ಯಮದಲ್ಲಿ ಹರಿಭಕ್ತಿಯ ಹಿರಿಮೆ, ಹರಿದಾಸರ ಗರಿಮೆಗಳನ್ನು ಹಾಗೂ ಉತ್ತಮ ಜೀವನ ಮೌಲ್ಯಗಳನ್ನು ಬಿತ್ತರಿಸುವ ನೂರಾರು ಉಗಾಭೋಗ, ಸುಳಾದಿ, ಕೀರ್ತನೆ, ದಂಡಕ, ವೃತ್ತನಾಮಾದಿ ಕೃತಿಗಳನ್ನು ರಚಿಸಿ ಹಾಡಿದರು. ಶ್ರೀಪಾದರಾಜರ ಈ ಭಕ್ತಿಸಾಹಿತ್ಯ ರಚನೆಯ ಪ್ರಕ್ರಿಯೆ ಅವರ ಶಿಷ್ಯ ವ್ಯಾಸರಾಯರ ಮೂಲಕ ಮುಂದುವರೆಯಿತು. ತೊಂಬತ್ತೆಂಟು ವರ್ಷಗಳ ತುಂಬುಬಾಳನ್ನು ಬಾಳಿದ ಶ್ರೀಪಾದರಾಜರು ಧ್ರುವಾಂಶ ಸಂಭೂತರೆಂಬ ನಂಬಿಕೆಯು ಜನಮಾನಸದಲ್ಲಿತ್ತು.

**ವ್ಯಾಸರಾಯರು : (ಕ್ರಿ.ಶ. ೧೪೪೭-೧೫೩೯)**

ಬನ್ನೂರಿನ ಬಲ್ಲಣ ಸುಮತಿ-ಲಕ್ಷ್ಮೀದೇವಿ ದಂಪತಿಗಳ ಕಿರಿಯ ಮಗನಾಗಿ ಹುಟ್ಟಿದ ವ್ಯಾಸರಾಯರ ಹುಟ್ಟು ಹೆಸರು ಯತಿರಾಜ. ಆರನೆಯ ವಯಸ್ಸಿನಲ್ಲಿ ಬ್ರಾಹ್ಮಣ್ಯತೀರ್ಥರಿಂದ ಸನ್ಯಾಸ ದೀಕ್ಷೆ. ಅನಂತರ ವಿಜಯನಗರದ ದೊರೆಗಳೊಂದಿಗೆ ಅತ್ಯಂತ ನಿಕಟ ಸಂಪರ್ಕವಿದ್ದ ಯತಿಗಳಿವರು. ಸಂಸ್ಕೃತ-ಕನ್ನಡ ಭಾಷೆಗಳೆರಡರಲ್ಲೂ ಅಗಾಧ ಪಾಂಡಿತ್ಯವನ್ನು ಗಳಿಸಿದ್ದ ವ್ಯಾಸರಾಯರು ಸಂಸ್ಕೃತದಲ್ಲಿ ತರ್ಕ ತಾಂಡವ ನ್ಯಾಯಾಮೃತ, ಚಂದ್ರಿಕಾ ಮೊದಲಾದ ವಿದ್ವತ್ಪೂರ್ಣ ಗ್ರಂಥಗಳನ್ನು ರಚಿಸಿ ಚಂದ್ರಿಕಾಚಾರ್ಯರೆಂದೇ ಖ್ಯಾತರಾಗಿರುವರು. ತಮಗೆ ಗೌರವವಾಗಿ, ದಾನವಾಗಿ ಬಂದ ಎಲ್ಲಾ ಸಂಪತ್ತನ್ನೂ ವ್ಯಾಸರಾಯರು ಜನರ ಅಭ್ಯುದಯಕ್ಕಾಗಿಯೇ ಪುನಃ ವಿನಿಯೋಗಿಸಿದ್ದಾರೆ. ಇವರ ಕಾಲದಲ್ಲಿ ಮಾಧ್ವತತ್ತ್ವ ಪ್ರಸಾರ ಹರಿದಾಸ ದೀಕ್ಷೆ ಪಡೆದ 'ದಾಸಕೂಟ'ದ ಮೂಲಕ ಆಯಿತು. ಪುರಂದರ-ಕನಕರು ವಾದಿರಾಜರ ಶಿಷ್ಯರಲ್ಲಿ ಪ್ರಮುಖರು ಹಾಗೂ ದಾಸಕೂಟದ ಮುಖ್ಯ ಹರಿದಾಸರು.

ಶ್ರೀಪಾದರಾಜರ ಸಾಹಿತ್ಯ ಸೃಷ್ಟಿಯಲ್ಲಿನ ದೃಷ್ಟಿ, ಭಾವಾದಿಗಳು ವ್ಯಾಸರಾಯರಲ್ಲಿ ಹಾಗೂ ಅವರ ಶಿಷ್ಯರಲ್ಲಿ ಇನ್ನಷ್ಟು ವಿಸ್ತಾರ ಪಡೆದವು. ವ್ಯಾಸರಾಯರು 'ಕೃಷ್ಣ', 'ಶ್ರೀಕೃಷ್ಣ', 'ಸಿರಿಕೃಷ್ಣ' ಅಂಕಿತದಲ್ಲಿ ನೂರಾರು ಕನ್ನಡ ಕೀರ್ತನೆಗಳನ್ನು ರಚಿಸಿದ್ದಾರೆ. ತಮ್ಮ ಇಷ್ಟದೇವತೆ ಕೃಷ್ಣನನ್ನು ಸ್ತುತಿಸುತ್ತ ಹಾಡಿ ಕುಣಿದಿರುವುದಲ್ಲದೆ ಕೃಷ್ಣನನ್ನು ಕುಣಿಸಿ ತಣಿಸಿದ್ದಾರೆ. ವಿಜಯನಗರದ ವಿಶ್ವವಿದ್ಯಾನಿಲಯಕ್ಕೆ ಕುಲಪತಿಗಳಾಗಿದ್ದ ವ್ಯಾಸರಾಯರು ವಿದ್ಯಾದಾನ ಗ್ರಂಥರಚನೆಗಳಿಂದ ಸಾಹಿತ್ಯ-ಸಂಗೀತ ಕ್ಷೇತ್ರಗಳಿಗೆ ಇತ್ತಿರುವ ಕೊಡುಗೆ ಅಪಾರ. ಸಂಗೀತ ಶಾಸ್ತ್ರಜ್ಞ ತುಳಜಾಜಿ ಇವರನ್ನು 'ಸಂಗಿತ ವಿದ್ಯಾಸಂಪ್ರದಾಯ ಪ್ರವರ್ತಕರೆಂದು ಕರೆದು ಗೌರವಿಸಿದ್ದಾನೆ.

**ವಾದಿರಾಜರು (ಕ್ರಿ.ಶ.ಸು. ೧೪೮೦-೧೬೦೦)**

ವಾದಿರಾಜರು ವ್ಯಾಸರಾಯರ ಪ್ರಮುಖ ಶಿಷ್ಯರಲ್ಲೊಬ್ಬರು. ವಾಗೀಶ ತೀರ್ಥರ ಅನುಗ್ರಹದಿಂದ ರಾಮಾಚಾರ್ಯ-ಸರಸ್ವತೀದೇವಿ ದಂಪತಿಗಳ ಹಿರಿಯಮಗನಾಗಿ ಹುಟ್ಟಿದವರು ಹುಟ್ಟಿದ ಸ್ಥಳ ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಹೂವಿನಕೆರೆ ಗ್ರಾಮ. ಹುಟ್ಟು ಹೆಸರು ವರಾಹ. ಎಂಟು ವರ್ಷದ ಬಾಲಕನಿಗೆ ಸನ್ಯಾಸ ದೀಕ್ಷೆಯಾಯಿತು. ಇವರಿಗೆ ವಾದಿರಾಜ ತೀರ್ಥರೆಂದು ಕರೆದು ಆಶೀರ್ವದಿಸಿದವರು ವಾಗೀಶತೀರ್ಥರು. ವಾದಿರಾಜರು ಸುಮಾರು ೭೦ ಸಂಸ್ಕೃತ ಗ್ರಂಥಗಳನ್ನು ರಚಿಸಿದ್ದಾರೆ. ಕನ್ನಡದಲ್ಲಿ 'ಹಯವದನ' ಅಂಕಿತದಿಂದ ನೂರಾರು ಸುಳಾದಿ ಉಗಾಭೋಗ, ಕೀರ್ತನೆಗಳನ್ನೂ, ವೈಕುಂಠವರ್ಣನೆ, ಲಕ್ಷ್ಮೀ ಶೋಭಾನೆ ಮೊದಲಾದ ಖಂಡಕಾವ್ಯಗಳಂತಿರುವ ದೀರ್ಘ ಕೀರ್ತನೆಗಳನ್ನು ರಚಿಸಿದ್ದಾರೆ. ಇವರ ಕೃತಿಗಳಲ್ಲಿ ಶಾಸ್ತ್ರ ವಿಚಾರಗಳ ಪ್ರತಿಪಾದನೆ ಹೆಚ್ಚಾಗಿದ್ದರೂ ಸಾಮಾಜಿಕ ಕಳಕಳಿ ನಿಚ್ಚಳವಾಗಿ ಅಭಿವ್ಯಕ್ತಗೊಂಡಿದೆ.

**ಪುರಂದರದಾಸರು (ಕ್ರಿ.ಶ. ಸು. ೧೪೮೪-೧೫೬೪) ಮತ್ತು ಕನಕದಾಸರು (ಕ್ರಿ.ಶ. ಸು. ೧೫೦೮-೧೬೦೬)** ಇವರೀರ್ವರ ವಿಚಾರವನ್ನು ಮುಂದಿನ ಅಧ್ಯಾಯಗಳಲ್ಲಿ ಅಂದರೆ ಜೀವನ ಚಿತ್ರಣ ಮತ್ತು ಇವರ ಕೀರ್ತನೆಗಳ ತೌಲನಿಕ ಅಧ್ಯಾಯನದಲ್ಲಿ ಚರ್ಚಿಸುವುದರಿಂದ ವಿಷಯಗಳು ಪುನರಾವರ್ತನೆಯಾಗುತ್ತವೆಂಬ ದೃಷ್ಟಿಯಿಂದ ಇವರ ವಿಚಾರವನ್ನು ಇಲ್ಲಿ ಚರ್ಚಿಸಿಲ್ಲ.

**ವಿಜಯದಾಸರು (ಕ್ರಿ.ಶ.ಸು. ೧೬೮೨-೧೭೫೫)**

ಪುರಂದರದಾಸರಿಂದ ಸ್ವಪ್ನಾಂಕಿತರಾದ 'ದಾಸಪ್ಪ' ವಿಜಯದಾಸರು 'ವಿಜಯದಶಮಿ' ಅಂಕಿತದಲ್ಲಿ ಅಪಾರ ಸಂಖ್ಯೆಯ ಸುಳಾದಿ ಉಗಾಭೋಗ

ಕೀರ್ತನೆಗಳನ್ನು ರಚಿಸಿದ್ದಾರೆ. ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಚೀಕಲಪರಿವೆಯಲ್ಲಿ ಹುಟ್ಟಿದ ಇವರ ಮೂಲ ಹೆಸರು ದಾಸಪ್ಪ. ಕಡುಬಡವೆಯಾದ ಕೂಸಮ್ಮನ ಮಗನಾದ ಇವರನ್ನು 'ಕೂಸೀಮಗ ದಾಸ' ಎಂದೇ ಅಪಹಾಸ್ಯ ಮಾಡುತ್ತಿದ್ದರು. ಅದೃಷ್ಟವಶಾತ್ ಹರಿಕರುಣವೆಂಬಂಥ ಕೀಲಿಕೈ, ಗುರುಕರುಣವೆಂಬ ಶಕ್ತಿಗಳ ಸಹಾಯದಿಂದ ಹರಿನಾಮದ ಮೂಲಕ ಜ್ಞಾನದೇಗುಲದ ಕದ ತೆರೆದರು. ಅಂತರಂಗದ ಕದವು ತೆರೆಯಿತೆಂದು ಪರವಶರಾಗಿ ಹಾಡಿದರು. ಸುಳಾದಿಗಳ ರಚನೆ ಇವರ ವೈಶಿಷ್ಟ್ಯ. ವಾದಿರಾಜರಲ್ಲಿ ಹೆಚ್ಚಾಗಿ ಕಾಣಿಸಿಕೊಂಡ ತತ್ತ್ವಪ್ರತಿಪಾದನೆ ಇವರ ಸುಳಾದಿಗಳ ಮೂಲಕ ಇನ್ನಷ್ಟು ವಿಪುಲವಾಗಿ ಮುನ್ನಡೆದಿದೆ. ಹೆಚ್ಚಿನ ಸಂಖ್ಯೆಯಲ್ಲಿ ಸುಳಾದಿಗಳನ್ನು ರಚಿಸಿದ್ದಾರೆ.

**ಗೋಪಾಲದಾಸರು (ಕ್ರಿ.ಶ. ಸು. ೧೭೨೨-೧೭೬೨)**

ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಮೊಸರುಕಲ್ಲಿನಲ್ಲಿ ಹುಟ್ಟಿದ ಭಾಗಣ್ಣ ವಿಜಯದಾಸರ ಶಿಷ್ಯರಾಗಿ ಗೋಪಾಲದಾಸರಾದರು. 'ಗೋಪಾಲವಿಠಲ' ಅಂಕಿತದಿಂದ ಕನ್ನಡದಲ್ಲಿ ನೂರಾರು ಕೀರ್ತನೆ ಸುಳಾದಿ ಉಗಾಭೋಗಗಳನ್ನು ರಚಿಸಿದ್ದಾರೆ. ತಂದೆ ಮುರಾರಿ, ಹರಿತಸ ಗೋತ್ರದವರು. ಬಾಲ್ಯದಲ್ಲೇ ಸಂಭವಿಸಿದ ತಂದೆಯ ಸಾವು, ಬಡತನದ ಬದುಕು ಭಾಗಣ್ಣನನ್ನು ಶ್ರೀಹರಿಯತ್ತ ಕೊಂಡೊಯ್ದು ಪರಮಹರಿಭಕ್ತರನ್ನಾಗಿ ಮಾಡಿತು. ಮಡಿ, ಆಚಾರ, ಸಂಪ್ರದಾಯಗಳನ್ನು ಇವರು ಹೊಸವಿಚಾರದ ಹಿನ್ನೆಲೆಯಲ್ಲಿ ಅರ್ಥೈಸಿದ್ದಾರೆ. 'ಬಟ್ಟೆಯನ್ನೊಣಗಿಸಿ ಉಟ್ಟರೆ ಅದು ಮಡಿಯಲ್ಲ, ಹೊಟ್ಟೆಯೊಳಗಣ ಕಾಮಕ್ರೋಧಗಳ ಬಿಟ್ಟರದು ಮಡಿ' ಎಂದಿದ್ದಾರೆ.

**ಹೆಳವನಕಟ್ಟೆ ಗಿರಿಯಮ್ಮ (ಕ್ರಿ.ಶ. ಸು. ೧೮ನೆಯ ಶತಮಾನ)**

ಧಾರವಾಡ ಜಿಲ್ಲೆಯ ರಾಣೆಬೆನ್ನೂರು ಗಿರಿಯಮ್ಮನ ಜನ್ಮಸ್ಥಳ. ತಂದೆ ಬಿಷಪ್ಪ ಜೋಯಿಸರು. ಚಿಕ್ಕಂದಿನಲ್ಲೇ ತಾಯಿ-ತಂದೆಯರನ್ನು ಕಳೆದುಕೊಂಡ ಗಿರಿಯಮ್ಮ ಹರಿಭಕ್ತಿಯನ್ನು ಆಶ್ರಯಿಸಿದಳು. 'ಹೆಳವನಕಟ್ಟೆ ರಂಗ' ಅಂಕಿತದಲ್ಲಿ ಕೆಲವು ಹಾಡುಗಳನ್ನು ರಚಿಸಿದ್ದಾಳೆ. ಮಲೆಬೆನ್ನೂರಿನ ತಿಪ್ಪರಸನೊಂದಿಗೆ ಮದುವೆಯಾದರೂ ಸಂಸಾರ ಜೀವನದಲ್ಲಿ ಆಸಕ್ತಿಯಲ್ಲದ ಆಕೆ ಗಂಡನಿಗೆ ಇನ್ನೊಂದು ಮದುವೆ ಮಾಡಿಸಿ ತಾನು ವಿರಾಗಿಣಿಯಾಗಿಯೇ ಬದುಕಿದಳು.

**ಜಗನ್ನಾಥದಾಸರು (ಕ್ರಿ.ಶ. ಸು. ೧೭೨೮ – ೧೮೦೯)**

ಜಗನ್ನಾಥದಾಸರು ಹುಟ್ಟಿದ್ದು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಬ್ಯಾಗವಟ್ಟದಲ್ಲಿ. ಹರಿತಸ ಗೋತ್ರದ ಯಜುರ್ವೇದಿಗಳಾದ ನರಸಿಂಹದಾಸ ಹಾಗೂ ಲಕ್ಷ್ಮೀಬಾಯಿಯವರ ಮಗನಾಗಿ ಹುಟ್ಟಿದ ಇವರ ಹುಟ್ಟು ಹೆಸರು ಶ್ರೀನಿವಾಸಾಚಾರ್ಯ. 'ಗುರುಕುಲ' ಪದ್ಧತಿಯಲ್ಲಿ ವಿದ್ಯಾದಾನ, ಅನ್ನದಾನ ಮಾಡುತ್ತಿದ್ದ ಮನೆತನ ಇವರದು. ಕ್ರಮೇಣ ಆಚಾರ್ಯರ ಆರೋಗ್ಯ ಕ್ಷೀಣಿಸಿ ಹೊಟ್ಟೆನೋವಿನಿಂದ ನರಳಲಾರಂಭಿಸಿದರು. ವಿಜಯದಾಸರ ಆದೇಶದಂತೆ ಗೋಪಾಲದಾಸರಿಂದ ಅವರ ಹೊಟ್ಟೆನೋವು ವಾಸಿಯಾಯಿತು ಎಂಬ ಪ್ರತೀತಿಯಿದೆ. ಗೋಪಾಲದಾಸರಿಂದ ನಲವತ್ತು ವರ್ಷ ಆಯುರ್ದಾನವನ್ನು ಪಡೆದ ಆಚಾರ್ಯರ ಮನಸ್ಸು ಸಂಪೂರ್ಣವಾಗಿ ಆಧ್ಯಾತ್ಮದತ್ತ ಒಲಿಯಿತು. ಹರಿದಾಸರಾಗುವ ಆಸೆ ಬಲಿಯಿತು. ಗೋಪಾಲದಾಸರ ಸೂಚನೆಯಂತೆ ಪಂಡರಾಪುರಕ್ಕೆ ಹೋಗಿ ಚಂದ್ರಭಾಗಾ ನದಿಯಲ್ಲಿ ಮೀಯುತ್ತಿದ್ದಾಗ ದೇವನಾಗರಿಲಿಪಿ-ಯಲ್ಲಿ 'ಜಗನ್ನಾಥವಿಠಲ' ಅಂಕಿತದಿಂದ ಕೀರ್ತನೆ ಸುಳಾದಿ ಉಗಾಭೋಗಗಳನ್ನೇ ಅಲ್ಲದೆ 'ಹರಿಕಥಾಮೃತಸಾರ'ವೆಂಬ ಮಧ್ವಶಾಸ್ತ್ರ ಗ್ರಂಥವನ್ನು ರಚಿಸಿದರು. ತ್ರಿಪದಿಯ ಸ್ವರೂಪದಲ್ಲಿರುವ 'ತತ್ವಸುವ್ವಾಲಿ'ಗಳು ಇವರ ವಿಶೇಷ ರಚನೆಗಳು.

**ಪ್ರಸನ್ನ ವೆಂಕಟದಾಸರು: (ಕ್ರಿ.ಶ. ಸು. ೧೬೮೦ – ೧೭೫೨)**

ಹರಿದಾಸರಲ್ಲಿ ಬಾಲಭಾಷೆಯನ್ನೇ (ಕಲಭಾಷೆ) ಬಳಸಿ ಕೃತಿರಚಿಸಿದ ಕೀರ್ತಿ ಪ್ರಸನ್ನ ವೆಂಕಟದಾಸರದು. "ಯಶೋಧೆಯೆಯಮ್ಮ ನನ್ನನುಯೆತ್ತಿಕೊಳ್ಳಮ್ಮ" ಎಂದು ಹಾಡಿರುವ ದಾಸರು ತಿರುಪತಿ ತಿಮ್ಮಪ್ಪನಿಂದ ಅಂಕಿತ ಪಡೆದವರು. ಬಾಗಲಕೋಟೆಯ ಕಾಖಂಡಕಿ ನರಸಪ್ಪಯ್ಯ ಲಕ್ಷ್ಮೀಬಾಯಿ ದಂಪತಿಗಳ ಮಗ. ಹಳ್ಳಿಹಳ್ಳಿಗಳನ್ನು ಸಂಚರಿಸಿ ಜನರನ್ನು ಸನ್ಮಾರ್ಗಕ್ಕೆ ಹಚ್ಚುವ ಕೆಲಸ ಮಾಡಿದರು. ಸುಳಾದಿ ಕೀರ್ತನೆ, ಉಗಾಭೋಗಗಳೇ ಅಲ್ಲದೆ ಭಾಗವತ, ದಶಮಸ್ಕಂದದ ಪೂರ್ವಾರ್ಧವನ್ನು ಕೀರ್ತನೆಗಳ ರೂಪದಲ್ಲಿ ಕನ್ನಡಿಸಿದ್ದಾರೆ.

**ಹರಪನಹಳ್ಳಿ ಭೀಮವ್ವ (ಕ್ರಿ.ಶ. ಸುಮಾರು ೧೮೨೩–೧೯೦೩)**

ರಗುನಾಥಾಚಾರ್ಯ–ರಾಘಮ್ಮ ದಂಪತಿಗಳ ಮಗಳಾಗಿ ಹೊಸಪೇಟೆ ತಾಲ್ಲೂಕಿನ ನಾರಾಯಣ ದೇವಕೆರೆಯಲ್ಲಿ ಹುಟ್ಟಿದವಳು ಭೀಮವ್ವ. ಇವಳ ತಾತ ಜೋಯಿಸ ವೆಂಕಪ್ಪಾಚಾರ್ಯರು ಹರಿದಾಸರಾಗಿದ್ದವರು. ಹರಿಭಕ್ತಿಯ ಸಾಂಪ್ರದಾಯಿಕ ವಾತಾವರಣದ ಮನೆಯ ಸಾಮಾಜಿಕ ರೂಢಿಯಂತೆ ಚಿಕ್ಕವಯಸ್ಸಿಗೆ ಮದುವೆ. ಅಕ್ಷರ ಜ್ಞಾನವೇ ಇಲ್ಲದ ಭೀಮವ್ವನಿಗೆ ಸ್ವಪ್ನದಲ್ಲಿಯೇ ನಾರದರಿಂದ 'ಭೀಮೇಶ ಕೃಷ್ಣ' ಅಂಕಿತ ದೊರೆಯಿತು. ಸ್ವಪ್ನದಲ್ಲಿ ಕಂಡ ದೃಶ್ಯಗಳು ಎಚ್ಚರದಲ್ಲಿ ಹಾಡಾಗತೊಡಗಿದವು. ಕೀರ್ತನೆ

ಸುಳಾದಿ ಉಗಾಭೋಗ ಹೀಗೆ ಪುಂಖಾನುಪುಂಖವಾಗಿ ಹಾಡುಗಳು ಬರಲಾರಂಭಿಸಿದವು. ಸಹಜ ಸಂಭಾಷಣೆ, ನಾಟಕೀಯತೆ, ಸೂಕ್ಷ್ಮಾತಿಸೂಕ್ಷ್ಮ ಭಾವನೆಗಳ ಅಭಿವ್ಯಕ್ತಿಗಳಲ್ಲಿ ಭೀಮವ್ವ ಬಲು ನಿಪುಣೆ.

**ರಾಮದಾಸರು (ಕ್ರಿ.ಶ. ಸು. ೧೮ನೆಯ ಶ.ದ ಉತ್ತರಾರ್ಧ)**

ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಬೋಳದಡಗಿ ಗ್ರಾಮದ ಪಿಂಜಾರ ಪಂಗಡಕ್ಕೆ ಸೇರಿದ ಮಹಮ್ಮದೀಯ ಖಾಜಾಸಾಹೇಬ, ಪೀರಮ್ಮ ಅವರ ಮಗನಾಗಿ ಹುಟ್ಟಿದ ಇವರ ಮೂಲ ಹೆಸರು ಬಡೇಸಾಬ. ಬಡತನದ ಬದುಕಿನಲ್ಲೂ ಕನ್ನಡ ಓದು ಬರಹ ಕಲಿತರು ಕೆಲಕಾಲ ಶಿಕ್ಷಕರಾಗಿದ್ದರು. ಕೀರ್ತನಕಾಂರರೂ ಪಂಡಿತರೂ ಆಗಿದ್ದ ವೆಂಕಟಭೀಮಾಚಾರ್ಯ ಮತ್ತು ಹನುಮಂತಾಚಾರ್ಯರ ಸತ್ಸಂಗದಿಂದ ಸಾಹೇಬರು ಪುರಾಣ, ಪುಣ್ಯಕತೆ, ಸಂಗೀತ ಶ್ರವಣಗಳಲ್ಲಿ ಕಾಲಕಳೆಯತೊಡಗಿದರು. ಶ್ರೀಹರಿ ಪ್ರೇರಣೆಯಿಂದ 'ರಾಮ', 'ಶ್ರೀರಾಮ' ಅಂಕಿತದಲ್ಲಿ ಕೃತಿರಚಸಿ 'ಶ್ರೀರಾಮದಾಸ'ರೆಂದು ಖ್ಯಾತರಾದರು. ರಾಮದಾಸರು ದಖ್ಖನಿ ಭಾಷೆಯಲ್ಲೂ ಕೆಲವು ಕೀರ್ತನೆಗಳನ್ನು ರಚಿಸಿದ್ದಾರೆ. ಸಂಸ್ಕೃತದಲ್ಲೂ ಒಂದು ಕೀರ್ತನೆಯಿದೆ. ಕೆಲವು ಕನ್ನಡ–ದಖ್ಖನಿ ಮಿಶ್ರಭಾಷೆಯಲ್ಲಿದೆ. ಭಾಷೆ ಬೇರೆಯಾದರೂ, ಪ್ರತಿಪಾದಿತ ವಸ್ತು, ಭಾವ, ತತ್ವಗಳು ಒಂದೇ, ಮಾಧ್ವತತ್ತ್ವಪದವಾದ ಹರಿಭಕ್ತಿಯೇ ಆಗಿದೆ ಎಂಬುದು ಗಮನಾರ್ಹ.

ಹರಿದಾಸ ಸಾಹಿತ್ಯವು ಶ್ರೀಪಾದರಾಜರಿಂದ ಮೊದಲು ಉಗಮವಾಗಿ ಹಂತ–ಹಂತವಾಗಿ ಅನೇಕಾನೇಕ ಹರಿದಾಸರಿಂದ ಮನ್ನಣೆ ಪಡೆದು ಬೆಳೆಯಿತು. ಪ್ರಚಾರದಲ್ಲಿ ಸೀಮಾತೀತವಾದ ಹರಿದಾಸ ಸಾಹಿತ್ಯ ಹದಿನೆಂಟನೆಯ ಶತಮಾನದವರೆಗೆ ತನ್ನ ಛಾಪನ್ನು ಮೂಡಿಸಿತ್ತು ಎಂದು ಕನ್ನಡ ಸಾಹಿತ್ಯಚರಿತ್ರೆಕಾರರು ಗುರುತಿಸಿದ್ದಾರೆ. ಆದರೆ ಅದರ ಪ್ರಭಾವ ಮಾತ್ರ ಜನಮಾನಸದಲ್ಲಿ ಇಂದಿಗೂ ಬೇರೂರಿದೆ ಎಂದರೆ ಉತ್ಪ್ರೇಕ್ಷೆಯಲ್ಲ.

**೧.೨ ಸ್ವರೂಪ**

ಹರಿದಾಸರ ಸಾಹಿತ್ಯ ಸ್ವರೂಪವನ್ನು ಗಮನದಲ್ಲಿಟ್ಟುಕೊಂಡಾಗ ಕೀರ್ತನೆ, ಉಗಾಭೋಗ, ಸುಳಾದಿಗಳ ರಚನೆಗಳು ವಿಶೇಷವಾಗಿ ಕಂಡುಬರುತ್ತವೆ.

**ಕೀರ್ತನೆ**

ಪಲ್ಲವಿ, ಅನುಪಲ್ಲವಿ, ನುಡಿ ಅಥವಾ ಚರಣಗಳಿಂದ ಕೂಡಿದ ಒಂದು ಘಟಕ. ರಾಗ–ತಾಳಗಳಿಂದ, ಬೆಸಸಂಖ್ಯೆಯ ನುಡಿಗಳಿಂದ ಕೂಡಿದ್ದು(ಇ.ಶ.೭) ಕೊನೆಯ

ನುಡಿಯಲ್ಲಿ ಆಯಾ ರಚನಕಾರರ ಅಂಕಿತವಿರುತ್ತದೆ. (ರಂಗವಿಠಲ, ಪುರಂದರವಿಠಲ, ಆದಿಕೇಶವ, ವಿಜಯವಿಠಲ ಇತ್ಯಾದಿ) ಪಲ್ಲವಿಯಲ್ಲಿ ದಾಸರು ಕಂಡ ದರ್ಶನವೋ ಹೇಳಬಯಸುವ ತತ್ತ್ವವೋ ಜೀವನಾನುಭವವೋ ಮೂಡಿಬಂದಿರುತ್ತದೆ. ಅನುಪಲ್ಲವಿಯಿಂದ ಅದನ್ನು ಪೋಷಿಸಿ ನುಡಿಗಳಿಂದ ಸಮರ್ಥಿಸಿರುತ್ತಾರೆ. ಹರಿಭಕ್ತಿಯ ಹಿನ್ನೆಲೆಯಲ್ಲಿ ದಾಸರ ಕೀರ್ತನೆಗಳಿಗೆ ವಸ್ತುವಾಗದ ವಿಷಯವೇ ಇಲ್ಲವೆಂದರೂ ಸರಿಯೆ. (ಮೆಣಸಿನಕಾಯಿಯೂ ಸೇರಿದಂತೆ) ರಾಗ –ತಾಳಗಳ ದೃಷ್ಟಿಯಿಂದ ಸುಳಾದಿಗಳಿಗಿಂತ, ಸರಳ ಹಾಗೂ ಉಗಾಭೋಗಗಳಿಗಿಂತ ಬಿಗಿಯಾದ ಬಂಧ ಕೀರ್ತನೆ.

**ಉಗಾಭೋಗ**

ರಾಗ–ತಾಳಗಳ ಕಟ್ಟಿಲ್ಲದ, ಸಾಂದ್ರ ಅನುಭಗಳಿಂದ ಕೂಡಿ ಪ್ರಾಸಬದ್ಧವಾಗಿದ್ದು, ಸಾಹಿತ್ಯ ದೃಷ್ಟಿಯಿಂದ ವಿಶೇಷ ಮೌಲ್ಯವುಳ್ಳ ಪ್ರಕಾರ ಉಗಾಭೋಗ, ಸಂಗೀತರ ಉದ್ಗ್ರಾಹಭೋ ಕನ್ನಡದಲ್ಲಿ ಉಗಾಭೋಗವಾಗಿರಬಹುದು. ಇಂತಿಷ್ಟೇ ಪಾದಗಳಿರಬೇಕೆಂಬ ನುಡಿಗಳಿರಬೇಕೆಂಬ ಕಟ್ಟುಪಾಡುಗಳಲ್ಲ. ಕೊನೆಯಲ್ಲಿ ರಚನಕಾರರ ಅಂಕಿತವಿರುತ್ತದೆ. ಪುರಂದರದಾಸರ ಒಂದು ಉಗಾಭೋಗ ಹೀಗಿದೆ:

'ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ
ನಿನ್ನಂಥ ತಂದೆ ಎನಗುಂಟು ನಿನಗಿಲ್ಲ
ನಿನ್ನಂಥ ದೊರೆ ಎನಗುಂಟು ನಿನಗಿಲ್ಲ
ನೀನೆ ಪರದೇಶಿ ನಾನೆ ಸ್ವದೇಶಿ
ನಿನ್ನರಸಿ ಲಕುಮಿ ಎನ್ನ ತಾಯಿ
ನಿನ್ನ ತಾಯ ತೋರೋ ಪುರಂದರವಿಠಲ

**ಸುಳಾದಿ**

ಇದು ದ್ರುವಾದಿ ಏಳು ತಾಳಗಳಲ್ಲಿರುವ ತಾಳಮಾಲಿಕೆ. ಕೆಲವೊಮ್ಮೆ ಐದು ತಾಳಗಳು ಮಾತ್ರ ಬರುತ್ತವೆ. ಆದಿತಾಳವೂ ಸೇರುವುದುಂಟು. ಒಂದೊಂದು 'ನುಡಿ' ಒಂದೊಂದು ತಾಳದಲ್ಲಿದ್ದು, ಪ್ರತಿನುಡಿಯ ಕೊನೆಯಲ್ಲೂ ರಚನಕಾರರ ಅಂಕಿತವಿರುತ್ತದೆ. ಸುಳಾದಿಯ ಕಡೆಯಲ್ಲಿ ಎರಡು ಸಾಲುಗಳು ಒಂದು 'ಜತೆ' ಬಂದಿದ್ದು ಸುಳಾದಿಯ ಸಾರವೆಲ್ಲ ಅದರಲ್ಲಿ ಅಡಕವಾಗಿರುತ್ತದೆ. ನುಡಿಯಲ್ಲಿ ನಿಯತವಾದ ಪಾದ ಸಂಖ್ಯೆಯೇನಿರುವುದಿಲ್ಲ. ಕೀರ್ತನೆ ಉಗಾಭೋಗಗಳಿಗಿಂತ ಬಿಗಿಯಾದ ಬಂಧವಿದು. ಸಂಗೀತದ ಹಿನ್ನೆಲೆಯಲ್ಲಿ, ಸಾಹಿತ್ಯದ ಚೌಕಟ್ಟಿನಲ್ಲಿ ತತ್ತ್ವಗಳ ಮೌಲ್ಯಗಳ

ನಿರೂಪಣೆಯಿರುವುದು ಸುಳಾದಿಗಳ ವೈಶಿಷ್ಟ್ಯ. 'ಶ್ರೀ ನಾರಾಯಣದೇವ ನೀನು ಶ್ರೀ ಲಕುಮಿ ...' ಎಂಬ ಸುಳಾದಿಯ ಒಂದು ನುಡಿ.

**ರೂಪಕ ತಾಳ**

ಬೊಮ್ಮ ಸರಸ್ವತಿ ಪಡೆದರಯ್ಯ ಶೇಷದೇವನ
ಉಮ್ಮೇಶದೇವನ ವಾಯುಭಾರತೀಯರು ಪಡೆದರಯ್ಯ
ಶೇಷ – ಸುವರ್ಣ – ಗಿರೀಶ – ಮಹೇಂದ್ರರ
ಪುತ್ರ ಪೌತ್ರ ಪರಂಪರೆಯಾಗಿ ಇಪ್ಪರು ಪುರಂದರವಿಠಲಾ

ಈ ಮೂರು ಪ್ರಕಾರಗಳೇ ಅಲ್ಲದೆ ವೃತ್ತನಾಮ, ದಂಡಕಗಳೆಂಬ ಪ್ರಕಾರಗಳನ್ನು ಹರಿದಾಸ ಸಾಹಿತ್ಯದಲ್ಲಿ ಕಾಣುತ್ತೇವಾದರೂ ಅವುಗಳ ಸಂಖ್ಯೆ ಬಹಳ ಕಡಿಮೆ. ಇಂತಹ ಸಾವಿರಾರು ರಚನೆಗಳನ್ನು ಒಟ್ಟಾಗಿ 'ಕೀರ್ತನೆಗಳು' ಅಥವಾ 'ಪದಗಳು' ಎಂದು ಕರೆಯುವುದು ರೂಢಿಯಲ್ಲಿದೆ. ಇವುಗಳ ಅಭ್ಯಾಸದಿಂದ ಹರಿದಾಸರ ಬದುಕು, ಪರಿಸರ ಆ ಕಾಲದ ಜನಸಾಮಾನ್ಯರ ಜೀವನದ ರೀತಿ–ನೀತಿಗಳನ್ನು ತಕ್ಕಮಟ್ಟಿಗೆ ತಿಳಿಯಬಹುದು. ಆಯಾ ಹರಿದಾಸರು ಕಂಡು ಕೇಳಿದ, ಅನುಭವಿಸಿದ ಲೋಕಾನುಭವವೂ, ಹರಿಭಕ್ತಿಯೂ ತಳುಕು ಹಾಕಿದಂತಿರುವ ಈ ಅಪಾರ ಕೃತಿರಾಶಿ ಒಂದು ರೀತಿಯಲ್ಲಿ ಲೋಕದ ಆಗುಹೋಗುಗಳಿಗೆ ಹರಿದಾಸರು ಪ್ರತಿಕ್ರಿಯೆಯೂ ಹೌದು. ಜನರ ನಡುವೆಯೇ ಓಡಾಡಿಕೊಂಡಿದ್ದು ಅವರ ಕಷ್ಟಸುಖಗಳನ್ನು ಕಂಡು ಸ್ಪಂದಿಸಿದ ದಾಸರ ಅನುಭವ ದಟ್ಟವಾದದ್ದು, ಸೂಕ್ಷ್ಮವಾದದ್ದು ಹಾಗೂ ವೈವಿಧ್ಯಪೂರ್ಣವಾದದ್ದು. ಹಾಗಾಗಿ ಅಂದಿನ ಸಮಾಜದ ಆಚಾರ–ವಿಚಾರಗಳು, ನಂಬಿಕೆ, ಮೌಲ್ಯಗಳು ಎಲ್ಲವೂ ನಮಗೆ ಹರಿದಾಸರ ಕೃತಿಗಳಲ್ಲಿ ಕಾಣಸಿಗುತ್ತವೆ.

ಜೊತೆಗೆ ಹರಿಭಕ್ತಿ ಸಾಧನೆಯ ವಿಚಾರದಲ್ಲಿಯೂ ಅಷ್ಟೆ. ಭಕ್ತರಾದ ಹರಿದಾಸರು ಭಗವಂತನೊಂದಿಗೆ ಬಗೆಬಗೆಯ ಮಾನವ ಸಂಬಂಧಗಳನ್ನು ಕಲ್ಪಿಸಿಕೊಂಡು ಅವನೊಡನೆ ಆಪ್ತವಾಗಿ ಸಂಭಾಷಿಸುವ ಮೂಲಕ ತಮ್ಮ 'ಹಕ್ಕು ಸ್ಥಾಪನೆ' ಮಾಡಿದ್ದಾರೆ. ಭಗವಂತನನ್ನು ಒಡೆಯ, ಗೆಳೆಯ, ಎಳೆಯ ಹಾಗೂ ಇನಿಯನನ್ನಾಗಿ ಕಲ್ಪಿಸಿಕೊಂಡು ಅವನೊಡನೆ ಆತ್ಮೀಯವಾಗಿ ಸಂಭಾಷಿಸುತ್ತಾ, ಬದುಕಿನ ಕಷ್ಟಕಾರ್ಪಣ್ಯಗಳನ್ನು ನಿವೇದಿಸಿಕೊಳ್ಳುತ್ತಾ ಅವನಿಗೆ ಹತ್ತಿರ ಹತ್ತಿರವಾಗುತ್ತಾ ಕೊನೆಗೆ ಅವನನ್ನೇ ತಮ್ಮ ಹೃದಯದಲ್ಲಿ ನೆಲೆಗೊಳಿಸುವ, ಎದುರಿನಲ್ಲೇ ಕಣ್ಣಾರೆ ಕಂಡು ವರ್ಣಿಸುವ ಹಂತವನ್ನು ಹರಿದಾಸರು ತಲುಪಿದ್ದಾರೆ. ಭಕ್ತರಾದ ಹರಿದಾಸರ ಅನುಭವದ ಈ ಹಂತವನ್ನೇ

'ದೈವಸಾಕ್ಷಾತ್ಕಾರ' ಎನ್ನಲಾಗಿದೆ. ಅಂದರೆ ತಮ್ಮ ಕಲ್ಪಿತ ಇಷ್ಟ ದೈವವನ್ನು ಕಣ್ಣಾರ ಕಂಡ ಅನುಭವ ಈ ಸಾಧನೆಯ ನಡುವಣ ಹಾದಿಯಲ್ಲಿ ಭಗವಂತ ಧಣಿ, ಒಡೆಯ, ತಾನು ಸೇವಕ, ದಾಸ ಎಂದು ಭಾವಿಸಿ, ತಮ್ಮ ಈ ಪ್ರಾಪಂಚಿಕ ಕಷ್ಟ ಕೋಟಲೆಗಳನ್ನು ದುಃಖ ದುಮ್ಮಾನಗಳನ್ನು ಒಡೆಯನಾದ ಭಗವಂತನಲ್ಲಿ ನಿವೇದಿಸಿಕೊಂಡು ಅವುಗಳಿಂದ ಬಿಡುಗಡೆಗೊಳಿಸಿ ಕಾಪಾಡಬೇಕೆಂದು ಹರಿಯಲ್ಲಿ ಮೊರೆಯಿಡುವ ನೈಚ್ಯಾನುಸಂಧಾನವೇ 'ದಾಸ್ಯಭಾವ'. ದಾಸನ ಮಾಡಿಕೊ ಎನ್ನ ಸಾಸಿರ ನಾಮದ ವೆಂಕಟರಮಣ ಎಂದು ಆ ವೆಂಕಟರಮಣನನ್ನು ಪ್ರಾರ್ಥಿಸುವ ಕ್ರಮ.

ದಾಸದಾಸರ ಮನೆಯ ದಾಸಿಯರ ಮಗ ನಾನು । ಮಂಕುದಾಸ ಮರುಳುದಾಸ ಎನ್ನುವ ಕನಕದಾಸರ ಮಾತುಗಳಾಗಲೀ, 'ದಾಸೋಹಾ ತವ ದಾಸೋಹಂ ತವ ದಾಸೋಹಂ ತವ ದಾಸೋಹಂ' ಎನ್ನುವ ಜಗನ್ನಾಥದಾಸರ ಅಂತರಂಗವಾಗಲೀ ಈ 'ದಾಸ್ಯಭಾವ'ದ ಅಭಿವ್ಯಕ್ತಿಯೇ ಆಗಿದೆ.

ಗೆಳೆತನದ ರುಚಿಯನ್ನು ಅರಿಯದವರು ತಂದೆ ತಾಯಿಗಳಲ್ಲಿ, ಒಡಹುಟ್ಟಿದವರಲ್ಲಿ, ಸೋದರ ಸಂಬಂಧಿಗಳಲ್ಲಿ, ಕೊನೆಗೆ ಗಂಡ ಹೆಂಡತಿಯರಲ್ಲೂ ಹಂಚಿಕೊಳ್ಳಲಾಗದ ಅತ್ಯಂತ ವೈಯಕ್ತಿಕ ಅನುಭವಗಳೂ, ಸಮಸ್ಯೆಗಳೂ ಕೂಡ ಸ್ನೇಹಿತರೆದುರಿನಲ್ಲಿ ಎತ್ತಲಾಗುತ್ತದೆ. ಸ್ನೇಹಿತರಲ್ಲಿ ಎಲ್ಲವನ್ನು ಹೇಳಿಕೊಂಡು ಹಗುರಾಗುತ್ತೇವೆ. ಆ ಸ್ನೇಹಭಾವವೇ ಸ್ನೇಹ ಸಂಬಂಧವೇ ಆಪ್ಯಾಯಮಾನ. ಆ ಸಲಿಗೆಯ ಸ್ವಾತಂತ್ರ್ಯ ವರ್ಣನಾತೀತ ಶ್ರೀಪಾದರಾಜರು ತಮ್ಮ ಬಾಲ್ಯದ ಗೆಳೆಯ ಕೃಷ್ಣನನ್ನು ಅಂದೊಮ್ಮೆ ಭೇಟಿಯಾದಾಗ

'ಮರೆತೆಯೇನೋ ರಂಗ ಮಂಗಳಾಂಗ
ತುರುಕರು ಕಾಯುವಲ್ಲಿ ತೊಂಡನಾಗಿದ್ದನ್ನ'

ಎಂದು ತಮ್ಮ ಗೆಳೆತನದ ಬುತ್ತಿಯನ್ನು ಬಿಚ್ಚಿರುವುದು ಎಂತಹ ಸುಂದರ ಕಲ್ಪನೆ. ಕೈಯಲ್ಲಿ ಕೋಲು, ಹೆಗಲಲ್ಲಿ ಜೋಲುಗಂಬಳಿ, ಕಂಕುಳಲ್ಲಿ ಕಲ್ಲಿಚೀಲ, ಕೊಳಲನೂದುತ್ತ ದನಕಾಯುವಾಗ ಜೊತೆಯಾಗುತ್ತಿದ್ದ ನನ್ನನ್ನು ಮರೆತೆಯೇನೋ ರಂಗ ಎಂದು ಕೇಳುವಾಗಿನ ಸ್ನೇಹ ಸಲಿಗೆ ಪ್ರೀತಿಗಳ ಕೇವಲ ಅನುಭವವೇದ್ಯ. ಅಲ್ಲದೆ ಇವೆಲ್ಲ ದೃಶ್ಯಮಯವಾಗಿ ನಮಗೆ ಅನುಭವಕ್ಕೆ ಬರುತ್ತವೆ. ಹೀಗೆ ದಾಸಸಾಹಿತ್ಯದ ಸ್ವರೂಪವು ವಿಭಿನ್ನವಾದ ಕೌಶಲದಿಂದ ಕೂಡಿದ್ದಾಗಿದೆ.

## ೧.೩ ವೈಶಿಷ್ಟ್ಯತೆ

ಭಾಷೆಯ ದೃಷ್ಟಿಯಿಂದ ದಾಸಸಾಹಿತ್ಯವು ಬಹಳ ವೈಶಿಷ್ಟ್ಯಪೂರ್ಣ. ಜನಭಾಷೆಯ ಅಶುದ್ಧರೂಪಗಳನ್ನು ಬೇಕಾದಂತೆ ಎತ್ತಿ ಬಳಸಿ ತನ್ನ ವಿಶಿಷ್ಟತೆಯನ್ನು ತೋರಿದೆ. ಕೀರ್ತನೆ ಮುಂತಾದವುಗಳಲ್ಲಿ ಅಲ್ಲದೆ, ಹರಿಕಥಾಮೃತಸಾರದಂಥ ಷಟ್ಪದಿ ಗ್ರಂಥದಲ್ಲಿಯೂ, ಪ್ರೌಢತತ್ವ ಪ್ರತಿಪಾದನೆಗಳು 'ಕಲುಷವಚನ'ಗಳನ್ನು ಉಪಯೋಗಿಸ-ಲಾಯಿತು. ಹೆಚ್ಚು ಜನಕ್ಕೆ ತಿಳಿದು ಬಂದಂಥ ಹಾಗೂ ಸೊಗಸುವಂಥ ಭಾಷೆ ಸಾಹಿತ್ಯದಲ್ಲಿರಬೇಕು. ಮಾತಿನಲ್ಲಿದ್ದ ರೂಪಕ್ಕೆ ಇದ್ದ ಅರ್ಥದ ಸಾಹಚಾರ್ಯ ತಿದ್ದಿದ ರೂಪಕ್ಕೆ ಬಾರದೆಂಬ ದೃಷ್ಟಿ ಇದರ ಮೂಲದಲ್ಲಿರಬೇಕು. ವಚನ ಸಾಹಿತ್ಯದಲ್ಲಿಯೂ ಇದೇ ದೃಷ್ಟಿಯಿದ್ದು ಹಳಗನ್ನಡದ ದೃಷ್ಟಿಯಿಂದ ಅಗ್ರಾಹ್ಯವೆನ್ನುವ ರೂಪಗಳನ್ನು ದಾಸಸಾಹಿತ್ಯ ಬಳಸಿತು. ಕೆಲವು ಸಲ ಈ ಶೈಲಿಯ ಅತಿರೇಕವಾಗಿ ಗ್ರಾಮ್ಯ ಇಲ್ಲವೆ ಪ್ರಚಲಿತ ದೇಸೀ ಬಂದು ಸಂದರ್ಭದ ಗಾಂಭೀರ್ಯಕ್ಕೆ ಕೊರತೆಯುಂಟು ಮಾಡುತ್ತದೆ. ಸಲಿಗೆ, ತಿಳಿನಗೆ, ಕಟಕಿಯಿದ್ದಲ್ಲಿ ಅದು ಬಹಳ ಸೊಗಸಾಗಿ ಪರಿಣಮಿಸುತ್ತದೆ. ಒಟ್ಟಿನಲ್ಲಿ ವಿಷಯ, ರೂಪ, ಭಾಷೆಗಳಲ್ಲಿ ದಾಸಸಾಹಿತ್ಯ ವಿಶಿಷ್ಟ ಕಾಂತಿಯುಳ್ಳುದಾಗಿ ಕನ್ನಡಿಗರ ಚಿರಸ್ಥಾಯಿಯಾದ ಸ್ವತ್ತಾಗಿದೆ. ಜನಕ್ಕೆ ಅದು ಹತ್ತಿರ ಬಂದಂತೆ ಜನವೂ ಅದರ ಹತ್ತಿರ ಹೋಗಿ ಸಂಸ್ಕೃತಿ ಸಂವರ್ಧನ ಕಾರ್ಯದಲ್ಲಿ ಅದರಿಂದ ಸ್ಫೂರ್ತಿ ಪಡೆಯಬೇಕು.

ದಾಸಸಾಹಿತ್ಯದ ಇನ್ನೊಂದು ವೈಶಿಷ್ಟ್ಯವೆಂದರೆ ಒಂದು ಸಣ್ಣ ಸಂಗತಿಯಿಂದಲೂ ಜಾಗೃತವಾಗುತ್ತಿದ್ದ ಹರಿದಾಸರ ನೀತಿಬೋಧಕ ಪ್ರವೃತ್ತಿ. ಕಾಗೆ–ಕೋಳಿಗಳ ಕೂಗು, ಡಂಗುರ, ನಗಾರಿ ಗಂಟೆಗಳ ಬಾರಿಸುವಿಕೆ, ಅಂಚೆ ಹಂಚುವಿಕೆ, ನಿದ್ರೆ ಬರುವಿಕೆ ಇವೆಲ್ಲವೂ ಹರಿದಾಸರಿಗೆ ಹರಿಭಕ್ತಿಯ ಪ್ರೇರಕ ಪರಿಕರಗಳೇ ಆಗಿ ಕಂಡಿವೆ. ಕಾಗೆಯ ಕೂಗು ಜನರನ್ನು 'ಪೂಜಾ ಸಮಯವಿದು ಏಳಿ ಮೈಮರೆದೊರಗಲು ಬೇಡಿ' ಎಂದು ಎಚ್ಚರಿಸುತ್ತದೆ. ಅವರ ಕಣ್ಣೆದುರಿನಲ್ಲೇ ನಡೆಯುತ್ತಿರುವ ಸಾಮಾನ್ಯ ಸಂಗತಿಗಳಿಗೆ ತಟ್ಟನೆ ಒಂದು ಆಧ್ಯಾತ್ಮಿಕ ತಿರುವು ಕೊಡುವ ದಾಸರ ಈ ತಂತ್ರದಿಂದ ಬಹುಶಃ ಕೇಳುಗರಿಗೆ ವಿದ್ಯುತ್ಸಂಚಾರವಾದ ಹಾಗಾಗಿರಬಹುದು. ಇದೂ ಕೂಡ ಒಂದು ರೀತಿಯಲ್ಲಿ ವೈಶಿಷ್ಟ್ಯವೆ. ಇಷ್ಟೇ ಅಲ್ಲ ಜನರಿಗೆ ಸಾಂತ್ವನದ ಮಾತನ್ನಾಡಿ, ಆಧ್ಯಾತ್ಮಿಕ ಹಸಿವನ್ನು ತಣಿಸಿ ಸಾಮಾಜಿಕ ಭದ್ರತೆಯನ್ನು ಒದಗಿಸುವ ಮೂಲಕ ಇಸ್ಲಾಂ ಧರ್ಮವನ್ನು ಎದುರಿಸಿ ನಿಂತರು ಹರಿದಾಸರು. ಸಂಪದ್ಭರಿತವಾದ, ಸುವರ್ಣಯುಗದಲ್ಲಿ ಆಡಳಿತ ನಡೆಸುತ್ತಿದ್ದ ಯಾವ ರಾಜಮಹಾರಾಜರೂ ಮಾಡಲಾಗದಿದ್ದ ಈ ಕೆಲಸವನ್ನು ಬರಿಗೈಯಲ್ಲಿ ಚಿಟಕಿ ತಂಬೂರಿ ಗೋಪಾಳಬುಟ್ಟಿಗಳನ್ನು ಹಿಡಿದು ಹೊರಟ ಈ ಸಂತರು

ಮಾಡಿದರು. ಜನರಲ್ಲಿ ಸಾಮಾಜಿಕ ಎಚ್ಚರಿಕೆ ಮೂಡಿಸುವ ಜವಾಬ್ದಾರಿ ಹೊತ್ತು ಸಮರ್ಥವಾಗಿ ನಿರ್ವಹಿಸಿದರು. ಹರಿಭಕ್ತಿಯ ಲೇಪನದಿಂದ ಅವರ ಕದಡಿದ ಮನಸ್ಸು ತಿಳಿಯಾಗುವಂತೆ ನೋಡಿಕೊಂಡರು. ಅವರ ಬದುಕಿಗೆ ನೆಮ್ಮದಿ ತಂದು ಕೊಟ್ಟ ಕೀರ್ತಿ ಹರಿದಾಸರದು ಉತ್ತಮ ಮೌಲ್ಯಗಳನ್ನು ಮತ್ತೆ-ಮತ್ತೆ ಒತ್ತಿ ಹೇಳುವ ಮೂಲಕ ಜನರಲ್ಲಿ ಉತ್ತಮ ಜೀವನಾಭಿರುಚಿ ಬೆಳೆಯಲು ಕಾರಣವಾದರು. ಪಾಪ-ಪುಣ್ಯಗಳ ವಿಧಿ-ನಿಷೇಧಗಳ ಬಗ್ಗೆ ಜನರಲ್ಲಿ ಎಚ್ಚರ ಮೂಡಿಸಿ ಸಾರ್ಥಕ ಬಾಳ್ವೆಯ ಕಲ್ಪನೆಯನ್ನು ತಂದು ಕೊಟ್ಟದ್ದರಿಂದ ಜನರ ಮನಸ್ಸು ಹೆಚ್ಚು ಹೆಚ್ಚು ಸಂಸ್ಕರಣಗೊಂಡಿತು. ಪರಸ್ಪರ ಹೃದಯ ಸಂವಾದ ಸಾಧ್ಯವಾಯಿತು.

### ೧.೪ ಮಹತ್ವ:

ಹರಿದಾಸ ಸಾಹಿತ್ಯದ ಮಹತ್ವವೆಂದರೆ, ಒಂದು ಕಡೆ ತತ್ತ್ವವಿಚಾರಗಳು ಮತ್ತೊಂದು ಕಡೆ ಬದುಕಿನ ಉತ್ತಮ ಮೌಲ್ಯಗಳನ್ನೂ ಜೀವನಾನುಭವದ ಪರಿಪಾಕದೊಂದಿಗೆ ಹಿಂಜಿ-ಹಿಂಜಿ ಜನರ ಎದುರಿನಲ್ಲಿಟ್ಟಿದ್ದಾರೆ. ಮೂಲಭೂತವಾಗಿ ಮನುಷ್ಯರ ಭಾವನೆಗಳನ್ನು, ಪರಸ್ಪರ ಮಾನವ ಸಂಬಂಧಗಳನ್ನು, ಸತ್ಯ, ಧರ್ಮ, ದಯೆ, ದಾನ ಮೊದಲಾದ ಒಪ್ಪಿತ ಸಾರ್ವತ್ರಿಕ ಜೀವನ ಮೌಲ್ಯಗಳನ್ನು ಕುರಿತು ಹೇಳುವುದರಿಂದ ಜೀವನಕ್ಕೆ ಅತ್ಯಂತ ಹತ್ತಿರವಾದ ಮಹತ್ವವಾದ ಸಂಬಂಧವನ್ನು ಹೊಂದಿದೆ.

ಹರಿದಾಸರ ಪ್ರಕಾರ ಮನುಷ್ಯನನ್ನು ದುಃಖದ ಕೂಪಕ್ಕೆ ತಳ್ಳುವ, ಅವನಿಗೆ ಹಿಂಸೆ ನೋವು ನಿರಾಸೆಗಳನ್ನು ಕೊಡುವ ವಸ್ತುಗಳು ಮೂರು, ಹೆಣ್ಣು, ಹೊನ್ನು, ಮಣ್ಣು. ಇವುಗಳ ಮೇಲಣ ಅತಿಯಾದ ಮೋಹವೇ ಮನುಷ್ಯನ ದುಃಖಕ್ಕೆ ಮೂಲವೆಂಬುದನ್ನು ಮತ್ತೆ ಮತ್ತೆ ತಮ್ಮ ಕೀರ್ತನೆಗಳ ಮೂಲಕ ಹಾಡಿ ಜನರಿಗೆ ಮನದಟ್ಟು ಮಾಡಿಕೊಡಲು ಯತ್ನಿಸಿರುವರು. ಈಗಾಗಲೇ ಹೇಳಿರುವಂತೆ ಹರಿದಾಸರು ಜೀವನ ಮೌಲ್ಯಗಳ ದೃಢೀಕರಣಕ್ಕೆ ಕಳಕಳಿಯಿಂದ ಪ್ರಯತ್ನಿಸಿದ್ದಾರೆ. ಇವರು ಯಾವುದೇ ಒಂದು ಸಮಾಜದಲ್ಲಿ ಲಿಖಿತ ನಿಯಮಗಳು 'ಕಾನೂನು ಎನ್ನಿಸಿಕೊಂಡರೆ' 'ಅಲಿಖಿತ ನಿಯಮಗಳು' ಮೌಲ್ಯಗಳೆನ್ನಿಸಿಕೊಳ್ಳುತ್ತವೆ. ಇಂತಹ ವಿಧಿ ನಿಷೇಧಗಳಿಂದ ವ್ಯಕ್ತಿಗತ ಬದುಕಿನಲ್ಲಿ, ಆ ಮೂಲಕ ಸಮಾಜದಲ್ಲಿ ಶಿಸ್ತು ಸಂಯಮಗಳುಂಟಾಗಿ ಒಟ್ಟಾರೆ ಬದುಕು ಉತ್ತಮವಾಗಬೇಕೆನ್ನುವ ಸದಾಶಯದಿಂದ ದಾಸರು ಪ್ರೀತಿ, ಸತ್ಯ, ದಯೆ, ದಾನ, ಧರ್ಮಗಳಂತಹ ಮೌಲ್ಯಗಳನ್ನು ಎತ್ತಿ ಹಿಡಿದು, ನಿಂತ ನೀರಾಗಿದ್ದ ಅನೇಕ ಮೌಲ್ಯಗಳಿಗೆ ಹೊಸ ಅರ್ಥಕೊಟ್ಟು ಅವುಗಳನ್ನು ದೃಢೀಕರಿಸಿದ್ದಾರೆ. 'ಸತ್ಸಂಗದ', 'ಧರ್ಮಾಂಚರ'

ಎಂಬಿತ್ಯಾದಿ ಆರ್ಷೇಯ ಮೌಲ್ಯಗಳೇ ಇಂದಿಗೂ ನಮ್ಮ ಸಮಾಜದಲ್ಲಿ ಮೌಲ್ಯಗಳಾಗಿ ಉಳಿದಿದೆ. ಹರಿದಾಸ ಸಾಹಿತ್ಯ ಜನಸಾಮಾನ್ಯರ ಭಾವನೆಗಳನ್ನು, ಸ್ವಭಾವಗಳನ್ನು ಸಂಬಂಧ ಅನುಬಂಧಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಅನಾವರಣಗೊಳಿಸುವುದರಿಂದ ಅವುಗಳೊಂದಿಗೆ 'ಹೃದಯ ಸಂವಾದ ಸಾಧ್ಯ' ಓದುಗರಲ್ಲಿ, ಹಾಡುವವರಲ್ಲಿ ಮತ್ತು ಕೇಳುವವರಲ್ಲಿ ಸಮಾನ ಭಾವ ತರಂಗಗಳೇಳುತ್ತವೆ.

ಹರಿದಾಸ ಸಾಹಿತ್ಯ ಸಮಾಜಕ್ಕೆ ಅತ್ಯಗತ್ಯವೆಂಬುದರಲ್ಲಿ ಎರಡು ಮಾತಿಲ್ಲ. ಬಿಡಿಗಾಸು ಖರ್ಚಿಲ್ಲದೆ ಎಲ್ಲರಿಗೂ ಧಾರಾಳವಾಗಿ ಮೊಗೆಮೊಗೆದು ಹಂಚಬಲ್ಲ ಪ್ರೀತಿಯ ಕಣಜ ಮನುಜನ ಹೃದಯ ಬತ್ತದ ಒರತೆ. ಆದರೆ ಆ ವಿಚಾರದಲ್ಲಿ ನಾವು ಅತ್ಯಂತ ಜಿಪುಣರಾಗಿ ವರ್ತಿಸುತ್ತೇವೆ. ಪ್ರೀತಿಯೆಂಬ ಜೀವನಮೌಲ್ಯವನ್ನು ತಮ್ಮ ನಡೆ–ನುಡಿಗಳಿಂದ ತೋರಿಸಿಕೊಟ್ಟು, ಸಮಾಜಕ್ಕೆ ನಿರ್ವಂಚನೆಯಿಂದ ಧಾರಾಳವಾಗಿ ಹಂಚಿಕೊಟ್ಟವರು ಹರಿದಾಸರು. ಹಾಗಾಗಿ ಸೂತ್ರಪ್ರಾಯವಾಗಿ, ಗಾದೆ ಮಾತುಗಳಂತೆ ಬರುವ ಸಾವಿರಾರು ಅನುಭವದ ರಸಗಟ್ಟಿಗಳು, ಇಂದಿಗೂ ನಮ್ಮೆಲ್ಲರ ದಾರಿದೀಪವಾಗಿವೆ. ಬಾಲ್ಯವಿವಾಹ ವಿಧವೆಯ ಸ್ಥಿತಿಗತಿಗಳ ಬಗ್ಗೆ ಧ್ವನಿ ಎತ್ತುವುದರ ಮೂಲಕ ದಾಸಸಾಹಿತ್ಯ ಇಡೀ ಕನ್ನಡ ಸಾಹಿತ್ಯ ಚರಿತ್ರೆಯ ಒಳಗೆ ಮಹತ್ವದ್ದಾಗಿದೆ.

## ಪುರಂದರದಾಸರು (ಕ್ರಿ.ಶ. ೧೪೮೪-೧೫೬೪)

ಪುರಂದರದಾಸರು ವ್ಯಾಸರಾಯರ ಪ್ರಮುಖ ಶಿಷ್ಯರಲ್ಲಿ ಒಬ್ಬರು. ಗುರುಮನೆಯ ಪರಿಸರದಲ್ಲಿದ್ದ ಕನ್ನಡ ಹರಿದಾಸ ಸಾಹಿತ್ಯವನ್ನು ನೇರವಾಗಿ ಜನರ ಬಾಗಿಲಿಗೆ ಒಯ್ದವರು. ಗುರುಗಳಿಂದ 'ದಾಸರೆಂದರೆ ಪುರಂದರದಾಸರಯ್ಯ' ಎನ್ನುವ ಮೆಚ್ಚುಗೆಗೆ ಪಾತ್ರರು. 'ಪುರಂದರ ವಿಠಲ' ಅಂಕಿತದಿಂದ ಸಾವಿರಾರು ಕೀರ್ತನೆ ಸುಳಾದಿ ಉಗಾಭೋಗಗಳನ್ನು ರಚಿಸಿ ಹಾಡಿ ಜನಮನವನ್ನು ತಣಿಸಿದ ಕೀರ್ತಿ ಇವರಿಗುಂಟು. ಇಂತಹ ಭಕ್ತರ ಜೀವನದ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲದಿರುವುದು ಕನ್ನಡಿಗರ ದುರ್ದೈವ. ಪುರಂದರದಾಸರ ಜೀವನದ ಬಗ್ಗೆ ದೊರೆತಿರುವ ಅಧಿಕೃತ ಮಾಹಿತಿಯೆಂದರೆ, ಕ್ರಿ.ಶ. ೧೫೨೭ರ ಕಮಲಾಪುರದ ತಾಮ್ರ ಶಾಸನವೊಂದೇ. ಅದರ ಪ್ರಕಾರ ಪುರಂದರದಾಸರು ವಸಿಷ್ಠಗೋತ್ರದ ಯಜುರ್ವೇದಿಗಳು. ಅವರಿಗೆ ಲಕ್ಷ್ಮಣದಾಸ, ಹೇಬಣದಾಸ, ಮಧ್ವಪದಾಸ ಎಂಬ ಮೂವರು ಗಂಡುಮಕ್ಕಳಿದ್ದರು. ಇವಿಷ್ಟೇ. ಉಳಿದ ವಿಚಾರಗಳೆಲ್ಲ ಅಂತೆ ಕಂತೆಗಳಾಗಿ ಕಾಲಕಾಲಕ್ಕೆ ಪವಾಡ ಸದೃಶವಾಗಿ ಸೇರ್ಪಡೆಯಾದಂಥವು.

ಪುರಂದರದಾಸರ ಕೃತಿಗಳಿಂದ ಗ್ರಹಿಸಬಹುದಾದ ವಿಷಯಗಳೆಂದರೆ ಅವರು ಆಗರ್ಭ ಶ್ರೀಮಂತರಾಗಿದ್ದು, ಹೆಂಡತಿಯ ದೆಸೆಯಿಂದ ಹರಿಭಕ್ತಿಯತ್ತ ವಾಲಿ ಎಲ್ಲವನ್ನೂ 'ಕೃಷ್ಣಾರ್ಪಣ' ಎಂದು ಶ್ರೀಹರಿಗೆ ಅರ್ಪಿಸಿ ಹರಿದಾಸರಾದರು. ಭಕ್ತಿ ಸಾಧನೆಯ ಜೊತೆ ಜೊತೆಗೇ ಸಮಾಜದ ಒಳಿತಿಗೆ ಶ್ರಮಿಸಿದರು. ಕೀರ್ತನೆಗಳ ವಸ್ತುವೈವಿಧ್ಯ, ಸಂಖ್ಯೆ, ಸಂಗೀತ ಗುಣಗಳ ದೃಷ್ಟಿಯಿಂದ ಪುರಂದರರು ಹರಿದಾಸರಲ್ಲಿ ವಿಶಿಷ್ಟರಾಗಿ ನಿಲ್ಲುವರು. ಗೆಜ್ಜೆಕಟ್ಟಿ ಕೈಯಲ್ಲಿ ಚಿಟಕಿ ಹಿಡಿದು ತಂಬೂರಿ ಮೀಟುತ್ತಾ ಹಾಡುತ್ತಾ ಮನೆಮನೆಗಳಿಗೆ ಹರಿಭಕ್ತಿಯ ಸಂದೇಶ ಮುಟ್ಟಿಸಿದರು. ಸಾಮಾನ್ಯ ಜನರ ಬದುಕು ಉತ್ತಮವಾಗಬೇಕೆಂಬ ಆಶಯದಿಂದ ಸರ್ವರ ಒಳಿತಿಗಾಗಿ ಶ್ರಮಿಸಿದ ಚೇತನ ಪುರಂದರದಾಸರು. ಇವರು ನಾರದರ ಅಂಶರೆಂಬ ನಂಬಿಕೆಯೂ ಇದೆ. 'ಧರ್ಮವೇ ಜಯವೆಂಬ ದಿವ್ಯಮಂತ್ರ' ಎಂಬುದು ಜನತೆಗೆ ಪುರಂದರದಾಸರು ಇತ್ತಿರುವ ದೀಕ್ಷಾಮಂತ್ರ.

ಪ್ರಾರಂಭದಲ್ಲಿ ಆಗರ್ಭ ಶ್ರೀಮಂತರಾಗಿದ್ದ ಶೀನಪ್ಪನಾಯಕರು ತಾಳ ತಂಬೂರಿ ಹಿಡಿದು ಕೃಷ್ಣನ ಭಕ್ತರಾಗಿ ಪುರಂದರದಾಸರಾಗಿ ಪರಿವರ್ತಿತರಾದುದಕ್ಕೆ ಇರುವ ಕಥೆ ಹೀಗಿದೆ: ಒಂದು ದಿನ ವೃದ್ಧ ಬ್ರಾಹ್ಮಣನೊಬ್ಬ ತನ್ನ ಮಗನ ಉಪನಯನಕ್ಕೆ ಹಣ ಸಹಾಯ ಪಡೆಯಲು ಒಂದು ತೆಂಗಿನಕಾಯಿ ತೆಗೆದುಕೊಂಡು ಶೀನಪ್ಪನಾಯಕರ ಅಂಗಡಿಗೆ ಹೋಗಿ ಹಣ ಸಹಾಯ ಕೇಳಿದ. ಆದರೆ ಮಹಾಜಿಪುಣನಾದ ಶೀನಪ್ಪ ಹಣ ಕೊಡದೆ ಅವರಿಗೆ ಮುಖಭಂಗ ಮಾಡಿ ಹೊರಗೆ ಕಳುಹಿಸಿದ. ಕೊನೆಗೆ, ಆ ವೃದ್ಧ ಬ್ರಾಹ್ಮಣ ಶೀನಪ್ಪನಾಯಕನ ಮನೆಗೆ ತೆರಳಿ ಅವರ ಹೆಂಡತಿಯ ಬೆಲೆಬಾಳುವ ಮೂಗುತಿಯನ್ನು ಪಡೆದು, ಶೀನಪ್ಪನ ಅಂಗಡಿಗೇ ತಂದು ಮಾರಲು ಯತ್ನಿಸಿದ. ಅನುಮಾನಗೊಂಡ ನಾಯಕ ತನ್ನ ಮನೆಗೆ ಹೋಗಿ ಹೆಂಡತಿಗೆ ಕೆಂಪೇರಿದ ಕಣ್ಣುಗಳಿಂದ 'ಪುರಂದರಘಡದ ಅರಸರು ಕೊಟ್ಟಿದ್ದ ಮೂಗುತಿಯೆಲ್ಲಿ' ಎಂದು ಕೇಳಿದ. ಆತನ ಹೆಂಡತಿ 'ಮನೆಯಲ್ಲಿ ತೆಗೆದಿರಿಸಿದ್ದೇನೆ' ಎಂದಳು. 'ಅದನ್ನೀಗಲೇ ತಂದುಕೊಡು, ನನಗೀಗಲೇ ಬೇಕು' ಎಂದು ಶೀನಪ್ಪ ಹೆಂಡತಿಯನ್ನು ಒತ್ತಾಯಿಸಿದ.

ಮೂಗುತಿಯನ್ನು ಬ್ರಾಹ್ಮಣನಿಗೆ ಕೊಟ್ಟಿದ್ದ ಸರಸ್ವತಿಬಾಯಿ ಬೇರೆ ದಾರಿ ಕಾಣದೆ ಮನೆಯೊಳಗೆ ಹೋಗಿ ಮೂಗುತಿಯನ್ನು ಹುಡುಕುವಂತೆ ನಟಿಸುತ್ತಾ ಪ್ರಾಣ ಕಳೆದುಕೊಳ್ಳಲು ಪಾಷಾಣವನ್ನು ಅರಸತೊಡಗಿದಳು. ತಂದಿಟ್ಟಿದ್ದ ಪಾಷಾಣವು ಆಕೆಯ ಕೈಗೆ ಸಿಕ್ಕಿತು. ಆನಂದದಿಂದ ಒಂದು ಬಟ್ಟಲಿನಲ್ಲಿ ನೀರಿನೊಡನೆ ಕಲಸಿ ಪ್ರತಿದಿನವೂ ಪೂಜಿಸುತ್ತಿದ್ದ ತುಲಸೀಗಿಡದ ಹತ್ತಿರ ಬಂದು 'ಜಗನ್ಮಾತೇ ಲೋಕಪಾವನೀ, ನಿನ್ನನ್ನು ಪೂಜಿಸುವ ಭಾಗ್ಯವು ಇಂದಿಗೆ ತಪ್ಪಿತು. ತಬ್ಬಲಿಯಾದ ಈ ಮಗುವನ್ನು ಕಾಪಾಡುವ

ಭಾರ ನಿನ್ನದು. ನಿಷ್ಕರುಣೆಯಾದ ನಾಯಕರಿಗೆ ಒಳ್ಳೆಯ ಬುದ್ಧಿ ಕೊಡು. ಹೀಗಾಗುವುದೆಂದು ನಾನು ಸ್ವಪ್ನದಲ್ಲಿಯೂ ಎಣಿಸಿರಲಿಲ್ಲ ಆತ್ಮಹತ್ಯಾ ದೋಷವು ಉಂಟಾಗದಂತೆ ಮಾಡು ತಾಯಿ. ಜನ್ಮಜನ್ಮದಲ್ಲಿಯೂ ನಾಯಕರೇ ನನಗೆ ಪತಿಯಾಗುವಂತೆ ಅನುಗ್ರಹಿಸು' ಎಂದು ಹೇಳುತ್ತಾ ವಿಷದ ಪಾತ್ರೆಯನ್ನು ಕುಡಿಯಲು ಎತ್ತಿದಾಗ 'ಟಣ್' ಎಂದು ಶಬ್ದವಾಯಿತು. ಆಶ್ಚರ್ಯದಿಂದ ನೋಡಿದಾಗ ಮೂಗುತಿಯು ಅದರಲ್ಲಿ ಬಿದ್ದಿದ್ದಿತು. ಆನಂದದಿಂದ ಅದನ್ನು ತೆಗೆದುಕೊಂಡು ಮಾತೆಗೆ ನಮಸ್ಕರಿಸಿ, ಮೂಗುತಿಯನ್ನು ಪತಿಯ ಕೈಗೆ ಕೊಟ್ಟಳು.

ಮೂಗುತಿಯು ಕೈಗೆ ಬರುತ್ತಲೇ ನಾಯಕರಿಗೆ ಯೋಚನೆಗಳು ಬಲವಾದವು. ಮನಸ್ಸಿಗೆ ನಿಲುಗಡೆಯೇ ಇಲ್ಲದಂತಾಯಿತು. 'ಎಂತಹ ಅಮೂಲ್ಯವಾದ ರತ್ನ! ಜೀವರತ್ನವೇ ಇದಕ್ಕೆ ಸಿಕ್ಕಿದಂತಿದೆ. ಇದು ಸಾಮಾನ್ಯ ಬ್ರಾಹ್ಮಣರ ಬಳಿಯಲ್ಲಿ ಇರತಕ್ಕುದಲ್ಲ. ಇವರೂ ಸಾಮಾನ್ಯರೂ ಅಲ್ಲ. ಯಾಚನೆಗಾಗಿ ಬಂದಿದ್ದರೆ, ಇಷ್ಟು ದೊಡ್ಡ ಪೇಟೆಯಲ್ಲಿ ನಾನೊಬ್ಬನೇ ದಾತನೆ? ಯಾರ ಬಳಿಗೂ ಹೋಗಲೂ ಇಲ್ಲ. ಇವರಿಗೆ ನನ್ನ ಸರ್ವಸ್ವವನ್ನು ಕೊಟ್ಟರೂ ಮೂಗುತಿಯ ಬೆಲೆಯಲ್ಲಿ ಅರ್ಧವಾಗದು. ಇದನ್ನು ಎಷ್ಟು ತುಚ್ಛವಾಗಿ ನೋಡುತ್ತಿರುವರು. ಇದಕ್ಕೆ ನೂರು ವರಹಗಳೇ ಬೆಲೆಯೇ ಅವರಿಗೆ ದ್ರೋಹ ಮಾಡಿದಂತಾಗುವುದಿಲ್ಲವೇ ಆಸೆಯಿಂದ ಅವರು ದೂರ ಇರುವವರು. ಇಲ್ಲವಾದರೆ ಇದುವರೆಗೆ ಇಲ್ಲಿಗೆ ಬರದೆ ಇರುತ್ತಿದ್ದರೆ? ಆನಂದವಾಗಿದ್ದಾರೆ. 'ಸಂತಾಪ' ಬ್ರಾಹ್ಮಣರು ಕೇಳಿದ ನೂರು ವರಹಗಳು ನನ್ನ ಧನದಲ್ಲಿ ತಿಲಾಂಶವಾದರೂ ಅಲ್ಲ. ಅದನ್ನು ಕೊಡುವ ಬುದ್ಧಿಯು ನನಗೇಕೆ ಹುಟ್ಟಲಿಲ್ಲ? ಗಳಿಸಿದ ಧನವೆಲ್ಲವೂ ನನ್ನ ಹಿಂದೆಯೇ ಬರುವುದೇ? ಯಾರಿಗೋ ಆಗುವ ಧನಕ್ಕೆ ನಾನು ಕಾವಲುಗಾರನೇ ಅಲ್ಲವೆ. ವಿಠಲಾ ನನಗೇಕಿಷ್ಟು ದುರ್ಬುದ್ಧಿ ಕೊಟ್ಟೆ. ಆಹಾ ಈಗ ಬಂದಿದ್ದವರು ಬ್ರಾಹ್ಮಣರಲ್ಲ. ಅವರ ಭಾವಗಳು ನನ್ನ ಹೃದಯಭೂಮಿಯಲ್ಲಿ ನಿಂತವು. ಎಲ್ಲಿ ನೋಡಿದರೂ ಬ್ರಾಹ್ಮಣರೇ. ಓ ಬ್ರಾಹ್ಮಣರೇ ನಿಲ್ಲಿ ನಿಲ್ಲಿ ನಿಮಗೆ ನೂರು ವರಹಗಳಲ್ಲ, ನನ್ನ ಸರ್ವಸ್ವವನ್ನು ಕೊಡುತ್ತೇನೆ. ನನ್ನನ್ನು ಪಾವನನನ್ನಾಗಿ ಮಾಡಿ. ಅಯೋಗ್ಯನೆಂದು ದೂರಬೇಡಿ. ಹಾಳು ಧನವು ಹಿಂಸೆಯಿಂದಲ್ಲದೆ ಬರುವುದಿಲ್ಲ. ಲೋಕವನ್ನೆಲ್ಲ ಹಿಂಸಿಸಿದ ಈ ಧನವು ನಿಮಗೆ ಬೇಡವೆಂದು ಹೇಳುವಿರಾ. ಇನ್ನು ನಾನು ಪಾವನನಾಗಲು ದಾರಿ ಯಾವುದು? ಘೋರ ಸರ್ಪದಷ್ಟನಾದ ನನಗೆ ದಿಕ್ಕೇ ಇಲ್ಲವೆ. ಪೂಜ್ಯರೇ ನನ್ನ ಸರ್ವಾಪರಾಧಗಳನ್ನು ಮನ್ನಿಸಲಾರಿರಾ? ಅನ್ನವನ್ನಿಡದ ಪಾಪಿಯೆಂದು ದೂರ ಸರಿಯುವಿರಾ? ನಿಜ ನಿಜ ನಾನು ಚಂಡಾಲನೇ ಹೌದು ಅಸ್ಪೃಶ್ಯ.

ನಿಮ್ಮ ಪಾದ ಕಮಲಗಳನ್ನು ಮುಟ್ಟಲು ಕೂಡಾ ಯೋಗ್ಯತೆಯಿಲ್ಲದವನು. ಹಸಿವಿನಿಂದ ತಾವು ಬಾಗಿಲಲ್ಲಿದ್ದರೂ ಉಂಡ ಕಠಿಣಾತ್ಮ, ದೈವದ್ರೋಹಿ. ನನ್ನನ್ನು ನೀವಲ್ಲದೆ ಮನ್ನಿಸುವವರು ಯಾರು ಎಂದು ನಾಯಕರು ಪ್ರಲಾಪಿಸುತ್ತಾ ಮೂಗುತಿಯನ್ನೇ ನೋಡಿದರು. ಆಶ್ಚರ್ಯವಿನ್ನೂ ಹೆಚ್ಚಾಯಿತು. 'ಕೃಷ್ಣಾರ್ಪಣ' ಎಂದು ಆ ಮೂಗುತಿಯನ್ನು ಎಸೆದುಬಿಟ್ಟರು. ಸರ್ವಸ್ವವನ್ನೂ ಕಳೆದುಕೊಂಡ ಹುಚ್ಚರಂತೆ ಬ್ರಾಹ್ಮಣರ ಹತ್ತಿರ ಓಡಿದರು. ನಮ್ರತೆಯಿಂದ 'ಸ್ವಾಮಿ ಬ್ರಾಹ್ಮಣರೇ' ಅಂದರು. ಅವರಿಗೂ ಆಶ್ಚರ್ಯವಾಯಿತು. ಏನು ಹೇಳುವುದಕ್ಕೂ ತೋರದೆ ಸ್ತಬ್ಧರಾದ ಅವರಿಗೆ ನಮಸ್ಕರಿಸಿ 'ಸ್ವಾಮೀ ದಯವಿಟ್ಟು ಹೇಳಿ ಈಗ ಬಂದಿದ್ದ ಪೂಜ್ಯರೆಲ್ಲಿ?' ಅಂದರು. ನಿಮ್ಮ ಹಿಂದೆಯೇ ಮನೆಗೆ ಬಂದರು ಅಂದು ಬಿಟ್ಟರು. ನಾಯಕರು ಓಡಿದರು. ಪೇಟೆಯ ಜನರಿಗೆಲ್ಲಾ ಇವರ ಸ್ಥಿತಿಯನ್ನು ನೋಡಿ ಆಶ್ಚರ್ಯವಾಯಿತು. ಯಾರಾದರು ನಾಯಕರೆ ಅಂದರೆ ಬ್ರಾಹ್ಮಣರು ಅನ್ನುವ ಮಾತಲ್ಲದೆ ಮತ್ತೊಂದಿಲ್ಲ.

ಪುರಂಧರಗಡದಿಂದ ಆಚೆ ಹರಿದಾರಿ ದೂರದಲ್ಲಿ ಒಂದು ಗುಹೆ. ಅಲ್ಲಿ ಜನ ಸಂಚಾರವು ವಿಶೇಷವಾಗಿರಲಿಲ್ಲ. ನಾಯಕರು ಅಲ್ಲಿಯವರೆವಿಗೂ ಓಡಾಡುತ್ತಾ ಗುಹೆಯಲ್ಲೇನಾದರೂ ಬ್ರಾಹ್ಮಣರಿರುವರೇ ಅಂದುಕೊಂಡು ಹತ್ತಿರ ಬಂದು ಒಳಗೆ ಇಣುಕಿ ನೋಡಿದರೆ ಬರಿಯ ಅಂಧಕಾರ. 'ಪೂಜ್ಯರೇ' ಎಂದರು. ಬಡವನಿಗೆ ನಿಧಿಯು ಸಿಕ್ಕಿದಂತಾಯಿತು. ಒಂದು ಪ್ರಕಾಶವು ಕಾಣಿಸಿ, ಒಳಗೆ ಇಬ್ಬರು ವ್ಯಕ್ತಿಗಳು ಗೋಚರಿಸಿದರು. ಆನಂದದಿಂದ ನುಗ್ಗಿ ಅವರ ಪಾದಗಳನ್ನು ಗಟ್ಟಿಯಾಗಿ ಹಿಡಿದು, 'ಪೂಜ್ಯರೇ ನನ್ನ ಸರ್ವಾಪರಾಧಗಳನ್ನು ಮನ್ನಿಸಿ' ಎಂದರು. 'ನಿನ್ನಿಂದ ಆಗಿರುವ ಅಪರಾಧವೇನು' ಎಂದು ಅವರು ಕೇಳಿದಾಗ, ಧನಲೋಭದಿಂದ ತಮ್ಮನ್ನು ಹೀನವಾಗಿ ನೋಡಿದ್ದೇನೆಂದು ನಾಯಕರು ತಮ್ಮ ನೋವನ್ನು ತೋಡಿಕೊಂಡರು.

ಅದಕ್ಕೆ ಉತ್ತರವಾಗಿ ಬ್ರಾಹ್ಮಣರು 'ಅದು ನಿನ್ನ ತಪ್ಪಲ್ಲ. ದ್ರವ್ಯವು ಮನುಷ್ಯನ ಬುದ್ಧಿಯನ್ನು ಕೆಡಿಸುವುದು ಪರಲೋಕದ ಮಾರ್ಗಕ್ಕೆ ಕಂಟಕ; ಮಾಯೆಗೆ ತವರು. ಅದನ್ನು ನಂಬಿದವರೆಲ್ಲ ಅರಿವನ್ನೇ ಹಾಳುಮಾಡಿಕೊಳ್ಳುತ್ತಿದ್ದಾರೆ' ಎಂದರು. ಆಗ ನಾಯಕ 'ನನ್ನ ಧನಬಂಧನವನ್ನು ಕಿತ್ತೊಗೆದು ಕಾಪಾಡಿ' ಎಂದು ವಿನಂತಿಸಿದರು. 'ಅದನ್ನು ಭಗವಂತನು ಈಡೇರಿಸುವನು. ನಿನ್ನ ಜನ್ಮವು ಶ್ರೇಷ್ಠವೆಂದು ತಿಳಿಸಲೆಂದೇ ನಾವು ಬಂದಿದ್ದೇವೆ. ಲೋಕವನ್ನು ಪಾವನ ಮಾಡುವ ಶಕ್ತಿ ನಿನ್ನಲ್ಲಿದೆ. ಕೀರ್ತನೆಗಳನ್ನು ರಚಿಸಿ ಜನರ ಮೌಢ್ಯ ನಿವಾರಿಸುವ ಸಂಗತಿಗಳನ್ನು ಹೇಳು.

ಮನುಷ್ಯ ಜನ್ಮವು ಹೇಗೆ ಅಧೋಗತಿ ಹೊಂದುವುದೆಂಬುದು ನಿನ್ನ ಅನುಭವಕ್ಕೆ ಬಂದಿದೆ. ಕೆಲವರು ನಾಸ್ತಿಕರಾಗಿದ್ದರೆ, ಇನ್ನು ಕೆಲವರು ಹಣ–ಅಧಿಕಾರಗಳ ಮದದಿಂದ ಅಕೃತ್ಯಗಳನ್ನು ಮಾಡುತ್ತಿದ್ದಾರೆ. ಸ್ಥಾನಮಾನಗಳ ಅರಿವೆಯೇ ಇಲ್ಲದೆ ತಿರುಗುತ್ತಿದ್ದಾರೆ. ಸ್ವಾರ್ಥಪರತೆಯಿಂದ ಲೋಕಕಂಟಕರಾಗಿ ಸತ್ಯಕ್ಕೆ ನೆಲೆಯೇ ಇಲ್ಲದಂತೆ ಮಾಡುತ್ತಿದ್ದಾರೆ. ದೈವದ್ರೋಹಿಗಳಾಗುವ ಈ ಗುಣಗಳು ಲೋಕದಲ್ಲಿ ಹೆಚ್ಚಿದಾಗ ನಾನು ನನ್ನ ಭಕ್ತರನ್ನು ಕಳುಹಿಸಿ ಜನರಿಗೆ ವಿವೇಕವನ್ನು ಹೇಳಿಸುತ್ತಲೇ ಇದ್ದೇನೆ. ಶಂಕರ, ಮಧ್ವ, ರಾಮಾನುಜರ ಅವತಾರಗಳು ನನ್ನ ಆಜ್ಞೆಯಿಂದಲೇ ನಡೆದಿವೆ. ಇನ್ನೂ ಅನೇಕ ಭಕ್ತರು ನನ್ನ ಉದ್ದಿಶ್ಯವನ್ನು ಈಡೇರಿಸಲು ಅವತರಿಸಿದ್ದಾರೆ. ಅವರೇ ನಾನು; ನಾನೇ ಅವರು. ಅವರಿಗೂ ನನಗೂ ಭೇದವಿಲ್ಲ. ನೀನು ಆ ಗುಂಪಿಗೆ ಸೇರಿದವನು.

ನಿನ್ನಂತಹವನಿಗೆ ಭವಬಂಧನಗಳು ಏನೂ ಮಾಡಲಾರವು. ಅಗ್ನಿಯಲ್ಲಿ ಬಿದ್ದ ಮಾಲಿನ್ಯ ಪದಾರ್ಥಗಳಂತೆ ನೀನು ಈ ತನಕ ಮಾಡಿರುವ ಕಾರ್ಯಗಳು ಲಯವಾಗುತ್ತವೆ. ನಿರ್ಮಲ ಹೃದಯವು ಲೋಕಹಿತಕ್ಕಾಗಿ ಮಿಡಿಯುತ್ತದೆ. ಮಲಿನ ಪದಾರ್ಥಗಳೆಲ್ಲ ಅಶಾಶ್ವತ. ಅವುಗಳ ಮೇಲಿನ ಅಭಿಮಾನವು ಮನಸ್ಸನ್ನು ಮಲಿನಗೊಳಿಸುತ್ತದೆ. ಅದರಿಂದ ಆಚ್ಛಾದಿತನಾದವನು ದೇಶದ್ರೋಹಿ ಆಗುತ್ತಾನೆ. ತಾನು ಬಂದಿರುವ ಉದ್ದಿಶ್ಯವನ್ನು ಮರೆಯುತ್ತಾನೆ. ಆದರೆ ಅರಿವು ಪಡೆದ ನೀನು ಧನ್ಯ. ದೇಶಹಿತಕ್ಕಾಗಿ ದಾಸನಾಗಲು ನನ್ನ ಅಪ್ಪಣೆಯಿದೆ. ಸಂತೋಷದ ಸಂಪತ್ತು ನಿನ್ನದಾಗಲಿ. ನೀನು ಪಾವನವಾದ ಕಾರ್ಯರಂಗಕ್ಕೆ ಇಳಿದಿರುವುದರಿಂದ 'ಪುರಂದರದಾಸ' ಎಂಬ ಅಭಿದಾನದಿಂದ ಲೋಕಸೇವೆ ಮಾಡು. ಲೋಕ ಸೇವೆಯೇ ಪರಮಾತ್ಮನ ಸೇವೆ ಎನ್ನುವುದನ್ನು ನಿಜವಾಗಿ ನಂಬು' ಎಂದರು. ಅವರ ಮಾತಿನಂತೆಯೇ ಲೋಕಕಲ್ಯಾಣಕ್ಕಾಗಿ ಸಮಾಜದ ಒಳಿತಿಗಾಗಿ ಪುರಂದರದಾಸನಾಗಿ ಊರೂರು ಸುತ್ತುತ್ತಾ ಸಮಾಜವನ್ನು ತಿದ್ದಿ ತೀಡುವ ಕೈಂಕರ್ಯ ಕೈಗೊಂಡರು.

ಈ ಹಿನ್ನೆಲೆಯಲ್ಲಿ ಅವಲೋಕಿಸಿದಾಗ, ಪುರಂದರದಾಸನ ಕೀರ್ತನೆಗಳಲ್ಲಿ ಸಮಾಜ ಜೀವನವನ್ನು ಕುರಿತ ಕೀರ್ತನೆಗಳು ಹೇರಳವಾಗಿರುವುದನ್ನು ಕಾಣುತ್ತೇವೆ. ಇವುಗಳಲ್ಲಿ ಸಂಸಾರದ ನಿಸ್ಸಾರತೆ, ವೈರಾಗ್ಯದ ಬೋಧೆಯಿದ್ದಂತೆ ಜೀವನ ನಿಷ್ಠೆಯೂ ಇದೆ. ಅನೀತಿ ಡಾಂಭಿಕತೆಗಳ ಕಟುವಿಮರ್ಶೆಯೊಡನೆ ಚಿರಂತನ ಮೌಲ್ಯಗಳ ಮತ್ತು ಭಕ್ತಿ ಮಹಿಮೆಯ ಉಪದೇಶವಿದೆ. ಸಮಾಜ ವಿಮರ್ಶೆಯ ಗೀತೆಗಳಲ್ಲಿ 'ನಗೆಯು ಬರುತಿದೆ' 'ತನುವ ನೀರೊಳಗದ್ದಿ ಫಲವೇನು' 'ಬೇವು ಬೆಲ್ಲದೊಳಿಡಲೇನು ಫಲ' 'ಮೂರ್ಖರಾದರು ಜನರು ಲೋಕದೊಳಗೆ' 'ಮಡಿ ಮಡಿಯೆಂದು ಅಡಿಗಡಿ ಹಾರುವಿ'

'ಜಾಲಿಯ ಮರದಂತೆ ಧರೆಯೊಳು ದುರ್ಜನರು' 'ಹೊಲೆಯ ಹೊರಗಿಹನೆ ಊರೊಳಗಿಲ್ಲವೆ' 'ಮಲವ ತೊಳೆಯಲ್ಲರಲ್ಲದೆ ಮನವ ತೊಳೆಯ ಬಲ್ಲರೆ' 'ಉದರ ವೈರಾಗ್ಯವಿದು' 'ಒಲ್ಲೆನೆ ವೈದಿಕ ಗಂಡನ' 'ಬೇನೆ ತಾಳಲಾರೆ, ಬಾಯೆನ್ನ ಗಂಡ' 'ತಾಳಿಯ ಹರಿದು ಬೀಸಾಟೆ' 'ಕೇಳನೊ ಹರಿ ತಾಳನೊ' 'ಇಬ್ಬರ್ಹೆಂಡಿರ ಸುಖವ ಇಂದು ಕಂಡೆನಯ್ಯ' ಇವನ್ನು ಗಮನಿಸಿದರೆ ಮನುಷ್ಯ ಸ್ವಭಾವದ ವೈವಿಧ್ಯತೆಗಳ ಪರಿಚಯ, ಸಮಾಜ ಜೀವನದಲ್ಲಿಯ ಸಾಮಾನ್ಯ ಅಧೋಗತಿಯ ನಿಚ್ಚಳವಾದ ಅರಿವು ಪುರಂದರದಾಸನಲ್ಲಿ ಎಷ್ಟರಮಟ್ಟಿಗೆ ಇತ್ತೆಂಬುದು ತಿಳಿಯುತ್ತದೆ. ವಿಡಂಬನೆ, ಹಾಸ್ಯಗಳ ಮೂಲಕ ಸಮಾಜದ ದೋಷಗಳನ್ನು 'ಉದರವೈರಾಗ್ಯವಿದು' ಮುಂತಾದ ಕೀರ್ತನೆಗಳಲ್ಲಿ ಟೀಕಿಸಿದ್ದಾರೆ.

ಆದರೆ, ಅವರ ಎಲ್ಲಾ ಹಾಡುಗಳಲ್ಲಿ ಭಾವಗೀತೆಯ ಸಂಪೂರ್ಣತೆ ಕಂಡು ಬಂದಿಲ್ಲ. ಪುನರುಕ್ತಿ-ಶೈಥಿಲ್ಯಗಳೂ ಅಲ್ಲಲ್ಲಿ ಹಣಿಕಿಕ್ಕಿವೆ. ರಚನಾ ಸೌಂದರ್ಯದ ಕಡೆಗೆ ಸಹೇತುಕವಾದ ಗಮನವಿಲ್ಲದ್ದರಿಂದ ಗುಣದೋಷಗಳು ಉಂಟಾಗಿವೆ. ಸಮಾಜ ಬೋಧನೆಯ ಕೀರ್ತನೆಗಳು ಸಮಾಜ ವಿಮರ್ಶೆಗಿಂತಲೂ ಹೆಚ್ಚಾಗಿವೆ. ಕೀರ್ತನೆಗಳಲ್ಲದೆ ಪುರಂದರದಾಸರು ಹಲವಾರು ಸುಳಾದಿಗಳನ್ನೂ ಉಗಾಭೋಗಗಳನ್ನೂ ಬರೆದಿದ್ದಾನೆ. ಅವುಗಳಲ್ಲಿ ಅವರ ಭಕ್ತಿಯೂ ಬೋಧನೆಯೂ ಸ್ವಚ್ಛಂದವಾಗಿ ಹರಿದಿದೆ. 'ಗೋಪಿ ದೇವಿಯಂತೆ ಒರಳಿಗೆ ಕಟ್ಟದೆ ಬಂದ ದೈನ್ಯಪಡುವೆ' ಮುಂತಾದ ಸುಳಾದಿಯ ಕಲ್ಪನೆ ಚೆನ್ನಾಗಿದೆ. ಬೆಲ್ಲದ ಕಟ್ಟೆಯ ಕಟ್ಟಿ ಬೇವಿನ ಬೀಜವ ಬಿತ್ತಿ ಜೇನು ಮಳೆಗರೆದರೆ ವಿಷ ಹೋಗುವದೇನಯ್ಯ" ಎಂಬಂತಹ ಸಮರ್ಪಕವಾದ ದೃಷ್ಟಾಂತದ ಉಗಾಭೋಗಗಳು ಹಿತಮಿತವಾಗಿವೆ. ಇವುಗಳ ರಚನಾ ರೀತಿಯನ್ನು ಕುರಿತು ಮುಂದೆ, ಅಧ್ಯಾಯಗಳಲ್ಲಿ ಪ್ರಸ್ತಾಪಿಸಲಾಗಿದೆ.

## ಕನಕದಾಸರು

ಕನಕದಾಸರು ಕ್ರಿ.ಶ. ಸುಮಾರು 1508 ರಿಂದ 1606ರ ಕಾಲಾವಧಿಯಲ್ಲಿ ಜೀವಿಸಿದ್ದರು. ಪುರಂದರದಾಸರು ಮತ್ತು ಕನಕದಾಸರು ಕನ್ನಡ ಹರಿದಾಸ ಸಾಹಿತ್ಯದ ಅಶ್ವಿನೀ ದೇವತೆಗಳೆಂದೇ ಖ್ಯಾತನಾಮರು. ಗುರು ವ್ಯಾಸರಾಯರ ಪಟ್ಟಶಿಷ್ಯರಾಗಿ ನಾಡಿನಲ್ಲಿ ಹರಿಭಕ್ತಿಯನ್ನೂ ಉತ್ತಮ ಜೀವನ ಮೌಲ್ಯಗಳನ್ನು ಬಿತ್ತಿ ಧರ್ಮಜಾಗೃತಿಯನ್ನುಂಟು ಮಾಡಿದವರು.

**ಕನಕದಾಸರ ಕಾಲ**

**೧. ಬಿ. ಶಿವಮೂರ್ತಿಶಾಸ್ತ್ರಿ, ಡಾ. ಕೆ.ಎಂ. ಕೃಷ್ಣರಾವ್** : ಅವರು "ಕನಕದಾಸರು ಹದಿನಾರನೆಯ ಶತಮಾನದಲ್ಲಿದ್ದ ಅವರ ಜೀವಿತದ ಕಾಲಾವಧಿ ಕ್ರಿ.ಶ. ೧೫೦೮ ರಿಂದ ೧೬೦೬. ಇವರು ವ್ಯಾಸರಾಯರ, ವಾದಿರಾಜರ, ತಾತಾಚಾರ್ಯರ, ವೈಕುಂಠದಾಸರ, ಪುರಂದರದಾಸರ ಮೊದಲಾದವರ ಸಮಕಾಲೀನರು.

**೨. ಡಾ. ಹಾ.ಮಾ. ನಾಯಕರು ಸಂಪಾದಿಸಿರುವ 'ಕನ್ನಡ ವಿಶ್ವಕೋಶ'** ದ **ಮೂರನೆಯ ಸಂಪುಟದ**ಲ್ಲಿ ಹೀಗಿದೆ: ಕನಕದಾಸರು ೧೫೦೯ ರಿಂದ ೧೬೦೭ರಲ್ಲಿ ಬಾಳಿದವರು. ವ್ಯಾಸರಾಯರ ನೇತೃತ್ವದಲ್ಲಿ ಹರಿದಾಸ ಪಂಥದಲ್ಲಿ ಸತತವಾಗಿ ಶ್ರಮಿಸಿದವರು.

**೩. ಡಾ. ಆರ್.ಸಿ. ಹಿರೇಮಠ:** ಪುರಂದರ, ಕನಕ ಹಾಗೂ ವ್ಯಾಸರಾಯರು ಸಮಕಾಲೀನರು ಎನ್ನುವುದು ಸಾಹಿತ್ಯ ಚರಿತ್ರೆಯಿಂದ ತಿಳಿದುಬರುತ್ತದೆ. ವ್ಯಾಸರಾಯರು, ಕೃಷ್ಣದೇವರಾಯನ ಕಾಲದಲ್ಲಿದ್ದರೆಂದೂ ಕೃಷ್ಣದೇವರಾಯನಿಗೆ ಕುಹುಯೋಗ ಪ್ರಾಪ್ರವಾದಾಗ ವ್ಯಾಸರಾಯರೇ ಕೆಲಕಾಲ ಸಿಂಹಾಸನ ಏರಿದ್ದರೆಂಬ ಪ್ರತೀತಿಯಿದೆ. ವ್ಯಾಸರಾಯರಿಂದ ಸ್ಥಾಪಿತವಾದ ವ್ಯಾಸಕೂಟ ದಾಸಕೂಟಗಳಲ್ಲಿ ಪುರಂದರದಾಸರು ಪ್ರಮುಖರು. ವ್ಯಾಸರಾಯರು ಕ್ರಿ.ಶ. ೧೪೪೨ ರಿಂದ ೧೫೩೯ರ ಅವಧಿಯಲ್ಲಿ ಜೀವಿಸಿರಬಹುದು. ಕನಕದಾಸರು ವ್ಯಾಸರಾಯರನ್ನು ಕ್ರಿ.ಶ. ೧೫೨೫ರ ಹೊತ್ತಿಗೆ ಕಂಡಂತೆ ತೋರುತ್ತದೆ. ಕನಕದಾಸರು ಶ್ರೀವೈಷ್ಣವ ಮತದ ಗುರುಗಳಾದ ತಿರುಮಲೆಯ ತಾತಾಚಾರ್ಯರಿಗೆ 'ನಾಲ್ವಗೆ ಫಲವೀವ ತಾತಾಚಾರ್ಯರಡಿಗೆರಗುವೆನು' (ಮೋಹನ ತರಂಗಿಣಿ ಪೀಠಿಕಾ ಸಂಧಿ ಪ–೪ರಲ್ಲಿ) ಎಂದಿದ್ದಾರೆ. ಈ ತಾತಾಚಾರ್ಯರು ಕೃಷ್ಣದೇವರಾಯನ ಕಾಲ ಕ್ರಿ.ಶ. ೧೫೦೯ ರಿಂದ ೧೫೩೦ರವರೆಗೆ ಇದರಿಂದ ಕನಕದಾಸರ ಕಾಲ ಕೃಷ್ಣದೇವರಾಯನ ಕಾಲವೆಂದೇ ಇಟ್ಟುಕೊಳ್ಳಬೇಕಾಗುತ್ತದೆ ಎಂದಿದ್ದಾರೆ.

**ಕನಕದಾಸರ ಕುಲ**

ಕನಕದಾಸರು ಯಾವ ಕುಲದಲ್ಲಿ ಹುಟ್ಟಿದವರೆನ್ನುವುದು ಇನ್ನೂ ನಿಗೂಢವಾಗಿದ್ದರೂ ವಿದ್ವಾಂಸರ ಅಭಿಪ್ರಾಯದಂತೆ ಕುರುಬ ಕುಲದಲ್ಲಿ ಜನಿಸಿದವರೆಂದು ಒಪ್ಪಿತವಾಗಿದೆ. ಕುರುಬರೂ ಕೂಡ ಕನಕದಾಸರನ್ನು ತಮ್ಮವರೆಂದೇ ಒಪ್ಪಿಕೊಂಡಿದ್ದಾರೆ. ಲೋಕೋತ್ತರ ಮಹಾನುಭಾವರು ಜಾತಿ, ಜನಾಂಗ, ಕುಲಗಳ

ಪರಿಮಿತ ಚೌಕಟ್ಟಿನೊಳಗೆ ಸೇರತಕ್ಕವರಲ್ಲ. ಇಷ್ಟಾದರೂ ಅವರು ಕುರುಬ ಜಾತಿಯವರೋ ಅಥವಾ ಬೇಡ (ನಾಯಕ) ಜಾತಿಯವರೋ ಎನ್ನುವ ಕುರಿತು ಚರ್ಚೆ. ಚಿಂತನ-ಮಂಥನಕ್ಕಿನ್ನೂ ಮುಕ್ತಿ ಸಿಕ್ಕಿಲ್ಲ.

ಇಂದಿನ ಹಾವೇರಿ ಜಿಲ್ಲೆಯ ಬಾಡ ಗ್ರಾಮದಲ್ಲಿ ಪಾಳೆಯಗಾರ ವಂಶದಲ್ಲಿ ಹುಟ್ಟಿದ ಕನಕದಾಸರ ಬದುಕು ರೋಮಾಂಚಕ ಘಟನೆಗಳಿಂದ ಕೂಡಿದೆ. ವಿಜಯನಗರ ದೊರೆಗಳ ಅಧೀನದಲ್ಲಿನ ಬಾಡ ಮತ್ತು ಬಂಕಾಪುರ ಭಾಗದ ೭೮ ಗ್ರಾಮಗಳ ನಾಡಗೌಡಿಕೆ ಮತ್ತು ದಣ್ಣಾಯಕನಾದ ಬೀರಪ್ಪ ಹಾಗೂ ಬಚ್ಚಮ್ಮರ ಮಗ. ತನ್ನ ಪರಾಕ್ರಮ ಮತ್ತು ದಕ್ಷತೆಯಿಂದ ವಿಜಯನಗರ ಅರಸರ ಮೆಚ್ಚುಗೆಗೆ ಪಾತ್ರನಾಗಿ, ಉತ್ತಮವಾಗಿ ಕಾರ್ಯ ನಿರ್ವಹಿಸಿ ಬೀರಪ್ಪ ಜನರ ಪ್ರೀತಿ ಗಳಿಸಿದ್ದನು.

ಮದುವೆಯಾದ ಬಹಳ ದಿನಗಳವರೆಗೆ ಮಕ್ಕಳಾಗದ ಬೀರಪ್ಪ ಮತ್ತು ಬಚ್ಚಮ್ಮ ಚಿಂತಾಕ್ರಾಂತರಾಗಿ ಕಂಡ ಕಂಡ ದೇವರಿಗೆ ಮೊರೆ ಹೊಕ್ಕರು. ಅದೇ ಸಂದರ್ಭದಲ್ಲಿ ಶ್ರೀವೈಷ್ಣವ ಮತವನ್ನು ಸ್ವೀಕರಿಸಿ ಭಕ್ತಿಯಿಂದ ಮುನ್ನಡೆಯುತ್ತಿದ್ದ ವಿಜಯನಗರ ಅರಸರ ಪ್ರಭಾವ ಇವರ ಮೇಲಾಯಿತು. ಇವರು ಕೂಡ ಶ್ರೀವೈಷ್ಣವ ಮತದ ಕಡೆಗೆ ಮನಸುಗೊಟ್ಟರು. ತಿರುಪತಿ ತಿಮ್ಮಪ್ಪನ ಯಾತ್ರೆ ಮಾಡಿ ಹರಕೆ ಹೊತ್ತು ಪಡೆದ ಗಂಡು ಮಗುವಿಗೆ 'ತಿಮ್ಮಪ್ಪ'ನೆಂದು ಹೆಸರಿಸಿ ಅಕ್ಕರೆಯಿಂದ ಬೆಳೆಸಿದರು. ದಣ್ಣಾಯಕತನಕ್ಕೆ ಸದೃಢವಾಗಿರಲೆಂದು ಕತ್ತಿವರಸೆ, ಅಶ್ವವಿದ್ಯೆ, ಬೇಟೆ, ಕುಸ್ತಿ ಮುಂತಾದ ಯುದ್ಧ ಕಲೆಗಳನ್ನು ಕಲಿಸಿದರು. ಅಲ್ಲದೆ ಒಳ್ಳೆಯ ಶಿಕ್ಷಣ, ಕಾವ್ಯ, ಶಾಸ್ತ್ರ, ಸಂಗೀತ, ಧರ್ಮ, ಪುರಾಣಗಳ ಅಧ್ಯಯನಕ್ಕೂ ಅವಕಾಶ ಕಲ್ಪಿಸಿದರು. ಕುಶಾಗ್ರಮತಿಯಾಗಿದ್ದ, ದೈಹಿಕವಾಗಿ ಗಟ್ಟಿಮುಟ್ಟಾಗಿದ್ದ ತಿಮ್ಮಪ್ಪನು ಅಷ್ಟೇ ವೇಗವಾಗಿ ಎಲ್ಲಾ ಕಲೆಗಳ ಮೇಲೆ ಹಿಡಿತ ಸಾಧಿಸಿ ತಂದೆಯಂತೆ ಪರಾಕ್ರಮಿಯಾದ. ಇಂಥ ಉನ್ನತಿಯ ಸಂದರ್ಭದಲ್ಲಿಯೇ ಪ್ರೀತಿಯಿಂದ ಬೆಳೆಸುತ್ತಿದ್ದ ತಂದೆಯನ್ನು ಕಳೆದುಕೊಂಡ. ತಾಯಿಯ ಮಾರ್ಗದರ್ಶನದಲ್ಲೇ ದಣ್ಣಾಯಕತನದ ಜವಾಬ್ದಾರಿಯನ್ನು ನಿರ್ವಹಿಸತೊಡಗಿದ ಮುಂದೆ ಬಂಕಾಪುರ ಪ್ರಾಂತದ ಅಧಿಕಾರಿಯಾದ.

"ಕನಕದಳದಲಿ ಬಂದನೆಂದರೆ ಫೌಜು ಕನಕಮನಕಾಗುವುದು"

"ಮೊಡಿತನವ ಬಿಡಿಸಿ ಸುಸ್ಥಿರ ಮಾರ್ಗ ತೋರಿಸಿ"

ಕೀರ್ತನೆಯಲ್ಲಿ ಬರುವ ಈ ಮಾತುಗಳು ತಿಮ್ಮಪ್ಪನು ಮೊನೆಗಾರ ಧಣಿಯಾಗಿದ್ದ-ನೆಂದೂ, ಅಸಮಾನ್ಯ ಶೂರನಾಗಿದ್ದನೆಂದೂ ಮತ್ತು ದೊರೆಯಾಗಿದ್ದನೆಂದೂ ಸ್ಪಷ್ಟವಾಗಿ ತಿಳಿಸುತ್ತವೆ.

ಇಪ್ಪತ್ತರ ತುಂಬು ಹರೆಯದಲ್ಲಿ ಮದುವೆಯಾಗುವ ಮನಸ್ಸು ಮಾಡಿದ ತಿಮ್ಮಪ್ಪ ತನಗೆ ಅನುರೂಪಳಾದ ಕನ್ಯೆಯನ್ನು ವಿವಾಹವಾದ. ಇವರಿಗೆ ಒಂದು ಗಂಡು ಮಗುವೂ ಆಗಿತ್ತೆಂಬ ಐತಿಹ್ಯವಿದೆ. ಕನಕದಾಸರು ತಮ್ಮ ಮೋಹನ ತರಂಗಿಣಿ ಕಾವ್ಯವನ್ನು ತನ್ನ ಹೆಂಡತಿಗೆ ಹೇಳುತ್ತಾನೋ ಅಥವಾ ಕಾಲ್ಪನಿಕ ಹೆಣ್ಣಿಗೆ ಹೇಳುತ್ತಾನೋ ಎಂಬ ಸಂದೇಹ ಕಾಡುವಷ್ಟು ಆ ಚಿತ್ರಣ ಅದ್ಭುತವಾಗಿ ಮೂಡಿಬಂದಿದೆ. ಅವರಿಬ್ಬರ ಸಂಭಾಷಣೆಗಳಲ್ಲಿ ಕವಿಯನ್ನು 'ಮನ್ಮೋನಾಥ' ಎಂದು ಅವಳು ಸಂಬೋಧಿಸಿದರೆ, ಅವನು 'ಮದ್ವಲ್ಲಭೆ' ಎಂದು ಸಂಬೋಧಿಸುತ್ತಾನೆ. ಮಡದಿ ಎಂಬುದಾಗಿಯೂ ಒಮ್ಮೆ ಸಂಬೋಧಿಸುತ್ತಾನೆ. ಆದ್ದರಿಂದ ಈ ಕಾವ್ಯದಲ್ಲಿಯ 'ಸುಜ್ಞಾನ 'ವಧೂಟಿ' ಕವಿಯ ಹೆಂಡತಿಯೇ ಎನ್ನಬಹುದು. ದಾಸರು ಆಕೆಯ ಗುಣ-ರೂಪದ ಆಕರ್ಷಣೆ ಎಂಥದೆಂಬುದನ್ನು ತಮ್ಮ ಕಾವ್ಯದಲ್ಲಿ ಸೊಗಸಾಗಿ ನಿರೂಪಿಸಿದ್ದಾರೆ.

**ಕಕ್ಕಸೆವೆತ್ತ ಕಾಮಿನಿಯ ಕಂಡು ಕ ।**
**ಣ್ಣಿಕ್ಕದಂತೆನ್ನ ಚಿತ್ತವನು ॥**
**ಅಕ್ಕೊತ್ತಿಗೊಂಡ ಭಾಮಿನಿ ರನ್ನಲಾಲಿಸು ।**
**ಸಕ್ಕರೆಯಂಥ ಮಾತುಗಳ ॥**

ಹೆಂಡತಿಯ ಚಿತ್ತಾಕರ್ಷಕ ವ್ಯಕ್ತಿತ್ವದ ಧ್ವನಿಪೂರ್ಣ ಚಿತ್ರಣ ಸುಂದರವಾಗಿ ಮೂಡಿಬಂದಿದೆ. ಅವಳ ಗುಣ, ರೂಪದ ಬಗೆಗೆ ಕವಿಗಿದ್ದ ಆಕರ್ಷಣೆ, ಶ್ರದ್ಧೆಗಳಿಂದಾಗಿಯೇ ತನ್ನ ಕಾವ್ಯದಲ್ಲಿ ಅವಳಿಗೆ ಸ್ಥಾನವಿತ್ತು ಒಲವನ್ನು ಪ್ರದರ್ಶಿಸಿದ. ಪತ್ನಿಯೊಡನೆ ಅನ್ಯೋನ್ಯವಾಗಿ, ಪ್ರೀತಿಯಿಂದ ಬಾಳುತ್ತಿದ್ದ. ಕೆಲವೇ ವರ್ಷಗಳಲ್ಲಿ ಕನಕನ ತಾಯಿ ತೀರಿಕೊಂಡಳು. ತ್ಯಾಗಮಯಿ ತಾಯಿಯ ಸಾವಿನಿಂದ ಕನಕನಿಗೆ ಆಘಾತವಾಗುತ್ತದೆ. ಈ ಆಘಾತ ಸರಣಿ ಮುಂದುವರೆದು ಮಗ, ಮಡದಿಯರೂ ವಿಧಿವಶರಾದರು. ಒಂದರ ಮೇಲೊಂದರಂತೆ ಬಂದೆರಗಿದ ಆಘಾತಗಳಿಂದ ಕನಕನ ಬಾಳಿನ ದಿಕ್ಕೇ ಬದಲಾಯಿತು. ಯುದ್ಧವೊಂದರಲ್ಲಿ ಉಂಟಾದ ಭೀಕರ ಪೆಟ್ಟು ಕೂಡ ಆತನ ಮನಸ್ಸಿನಲ್ಲಿ ಸುಪ್ತವಾಗಿದ್ದ ದೈವೀಶಕ್ತಿಯನ್ನು ಸ್ಫೋಟಗೊಳಿಸಿ ವೈರಾಗ್ಯಪರ-ನನ್ನಾಗಿಸಿತು.

ವಿರಕ್ತನಾಗಿ ಮನೆ ತೊರೆದ ತಿಮ್ಮಪ್ಪನನ್ನು ಮಠದಲ್ಲಿದ್ದ ವ್ಯಾಸರಾಯರು ಕನಕದಾಸರಾಗಿಸಿ ಶಿಷ್ಯರನ್ನಾಗಿ ಸ್ವೀಕರಿಸಿದರು. ಕನಕದಾಸರೂ ತಮ್ಮ ದಾಸ ಕೈಂಕರ್ಯವನ್ನು ನಿಷ್ಠೆಯಿಂದ ಮಾಡಿದರು ಕೃಷ್ಣದೇವರಾಯನ ವೈಭವದ ಕಾಲದಲ್ಲಿ ಬಾಳಿದ ಕನಕದಾಸರನ್ನು ಸಮಕಾಲೀನರಾದ ಪುರಂದರದಾಸರೂ ಆದರಿಸಿ ಮನ್ನಣೆ

ಇತ್ತರು. ನಾಡಿನ ಹಲವಾರು ಕವಿಗಳು ಮತ್ತು ಸಂತರಂತೆ ಕನಕದಾಸರೂ ತಮ್ಮ ಜೀವನ ವಿವರಗಳನ್ನು ತಿಳಿಸುವ ವಿಷಯದಲ್ಲಿ ಆಸಕ್ತಿ ವಹಿಸದೇ ಇದ್ದಕಾರಣ ಅವರ ವಿಶಿಷ್ಟ ವ್ಯಕ್ತಿತ್ವದ ನಾಡಿಮಿಡಿತವನ್ನು ನಾವು ನೇರವಾಗಿ ಅರಿಯದಾಗಿದ್ದೇವೆ. ಆದರೂ ಅವರ ಕೃತಿಗಳಿಂದ ನಾವು ಊಹಿಸಿರುವಂತೆ ಅವರು ವಿಶಾಲ ಮನೋಧರ್ಮದ ಮೂಲಗಾಮಿ ವಿಚಾರದ ಪರಮಾತ್ಮನ ಭಕ್ತರಾಗಿದ್ದರು.

'ಅರಿವೇ ಗುರು' ಎಂಬಂತೆ ತಮ್ಮ ಸುತ್ತಮುತ್ತಲಿನ ಪರಿಸರ ಸಂಸ್ಕೃತಿಯಿಂದ ಕನಕದಾಸರು ಅಪಾರವಾದ ಜ್ಞಾನ ಸಂಪಾದಿಸಿದರು. ಅವರ ಜೀವನದಂತೆ ಅವರ ದರ್ಶನ ಮತ್ತು ಕೃತಿಗಳಿಂದ ದೊರೆಯುವ ಸಂದೇಶ ಸಾಂಪ್ರದಾಯಕತೆಯಲ್ಲಿ ಹುದುಗಿರುವ ಸನಾತನ, ಮೂಲಭೂತ ಸತ್ಯದ ಅರಿವನ್ನು ಅವರದೇ ಆದ ಅನುಭಾವನಿಷ್ಠ ತರ್ಕದಿಂದ ಸಂದೇಹವಿಲ್ಲದಂತೆ ಸಾಧಿಸಿ ಘಂಟಾಘೋಷವಾಗಿ ಸಾರಿವೆ.

ಮೋಹನ ತರಂಗಿಣಿ, ನಳಚರಿತ್ರೆ, ಹರಿಭಕ್ತಿಸಾರ, ರಾಮಧಾನ್ಯ ಚರಿತ್ರೆಗಳನ್ನು ರಚಿಸುವ ಮೂಲಕ ಕವಿಗಳೆನಿಸಿಕೊಂಡ ಕನಕದಾಸರು ಹರಿದಾಸ ಸಾಹಿತ್ಯದ ಏಕೈಕ ಕವಿ. ಮೊದಲು ಕವಿಯಾಗಿದ್ದ ಕನಕದಾಸರು ಹರಿದಾಸ ದೀಕ್ಷೆ ಪಡೆದು ಭಕ್ತಕವಿಯಾದರು. 'ಆದಿಕೇಶವ'ನ ಅಂಕಿತದಲ್ಲಿ ನೂರಾರು ಕೀರ್ತನೆಗಳನ್ನು ರಚಿಸಿದ್ದಾರೆ. ಇವರು ರಚಿಸಿದ ಉಗಾಭೋಗ ಸುಳಾದಿಗಳು ಸಿಕ್ಕಿಲ್ಲ. ಸಾಮಾಜಿಕ ಕಳಕಳಿಯುಳ್ಳ ಕನಕದಾಸರು ಅನ್ಯಾಯವನ್ನು ದಿಟ್ಟತನದಿಂದ ಎದುರಿಸ ಬಲ್ಲವರಾಗಿದ್ದರು. ಸಮಾಜದ ಕೆಳವರ್ಗದಿಂದ ಬಂದ ಕನಕದಾಸರ ಕೀರ್ತನೆಗಳಲ್ಲಿ ಕೆಚ್ಚು, ಸ್ವಾನುಭವ, ನೋವಿನ ಎಳೆ ಹಾಗೂ ಪ್ರತಿಭಟನೆಯ ದನಿಗಳನ್ನು ಸ್ಪಷ್ಟವಾಗಿ ಗುರುತಿಸಬಹುದು.

ಕನಕದಾಸರ ಸಾಹಿತ್ಯವನ್ನು ಇಡಿಯಾಗಿ ಗಮನಿಸಿದಾಗ, ಅದರಲ್ಲಿ ಜೀವನದುದ್ದಕ್ಕೂ ಅವರು ಕಂಡುಂಡ ದುಃಖ ದುಮ್ಮಾನಗಳು ಮತ್ತು ನೋವುಗಳೇ ಅಧಿಕವಾಗಿವೆ. ಆ ದುಃಖ ದುಮ್ಮಾನ, ನೋವುಗಳೆ ಅವರನ್ನು ಪರಿಪೂರ್ಣ ವ್ಯಕ್ತಿಯನ್ನಾಗಿಸಿ ನಿಜದ ನೆಲೆ ತಿಳಿಯಲು ಕಾವ್ಯಸೃಷ್ಟಿಯ ಉಗಮಕ್ಕೆ ಕಾರಣವಾದವು.

ಶ್ರೇಷ್ಠ ರಚನಕಾರರಾದ ಕನಕದಾಸರ ಕಾವ್ಯಗಳಲ್ಲಿ ಸಮಕಾಲೀನ ಜೀವನದ ಸಾಮಾಜಿಕ ಮತ್ತು ರಾಜಕೀಯ ಸ್ಥಿತ್ಯಂತರಗಳು ಎದ್ದು ಕಾಣುತ್ತವೆ. ಕೀರ್ತನೆಗಳಲ್ಲಿನ ವ್ಯಂಗ್ಯ, ವಿಡಂಬನೆಯ ಮಾತುಗಳು ತುಳಿತಕ್ಕೊಳಗಾದ ಹಿಂದುಳಿದ ವರ್ಗದಿಂದ ಬಂದ ಅವರ ಸಾಮಾಜಿಕ ದೃಷ್ಟಿಕೋನಕ್ಕೆ ಹಿಡಿದ ಕನ್ನಡಿಯಾಗಿದೆ.

ಹರಿದಾಸ ಸಾಹಿತ್ಯದ ಸ್ವರ್ಣ ಯುಗದಲ್ಲಿ ಬಾಳಿ ಬದುಕಿದ ಕನಕದಾಸರು ದಾಸಶ್ರೇಷ್ಠರಲ್ಲಿ ಒಬ್ಬರೆನಿಸಿಕೊಂಡು ದಾರ್ಶನಿಕ ಕವಿಗಳಲ್ಲಿ ವಿಶಿಷ್ಟ ಸ್ಥಾನ ಪಡೆದರು. ಕೆಳವರ್ಗದಲ್ಲಿ ಜನಿಸಿದರೂ ಯೋಗ್ಯತೆ, ಭಕ್ತಿಯ ಪರಿಶುದ್ಧತೆಯಿಂದ ವರ್ಣದಲ್ಲಿ ಹಿರಿಯರು ಎನಿಸಿಕೊಂಡವರಿಗಿಂತಲೂ ಹಿರಿಯರಾಗಿ ಬೆಳಗಿದರು. ಇವರ ಭಕ್ತಿಯ (ಅಲೌಕಿಕ) ನೆಲೆಯನ್ನು ತಿಳಿಯಲು 'ಹರಿಭಕ್ತ ಸಾರ'ವನ್ನು ಓದಬೇಕು. ಸಮಕಾಲೀನ ಸಮಾಜದ ಲೌಕಿಕ ಬದುಕಿನ ಬವಣೆಗಳನ್ನು ತಿಳಿಯಲು ರಾಮಧಾನ್ಯ ಚರಿತ್ರೆಯನ್ನು ಓದಬೇಕು. ಇವೆರಡು ಕೃತಿಗಳು ಲೌಕಿಕ-ಅಲೌಕಿಕಗಳ ಸಂಗಮವಾಗಿ ದಿವ್ಯಾನುಭವ ನೀಡುತ್ತವೆ.

ಜೀವನ ಜಂಜಾಟದಿಂದ ಬೇಸತ್ತ ಕನಕದಾಸರು ತಮ್ಮ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಿದಾಗ ಒಂದು ರೀತಿಯ ಪರಿಪಕ್ವ ಸ್ಥಿತಿಯನ್ನು ತಲುಪಿದ್ದರು. ಎಲ್ಲದರಿಂದ ಬಿಡಿಸಿಕೊಂಡ ಮೇಲೆ ಇನ್ನಾರ ಭಯ ಎನ್ನುವಂತೆ ಲೌಕಿಕ ವ್ಯಾಪಾರವನ್ನು ತೊರೆದು ಆದಿಕೇಶವನ ಸ್ಮರಣೆ ಮಾಡುತ್ತ ದೇಶವ್ಯಾಪಿ ಸಂಚರಿಸಿದರು. ಆ ಸಂದರ್ಭದಲ್ಲಿ ಅನುಭಾವಿಗಳ ಸಂಪರ್ಕ, ಕನ್ನಡ ಹಾಗೂ ಸಂಸ್ಕೃತ ಕಾವ್ಯಗಳ ಅಧ್ಯಯನ ಮತ್ತು ಲೋಕದ ಅನುಭವಗಳು ಅನೇಕ ಕಾವ್ಯ ಹಾಗೂ ಕೀರ್ತನೆಗಳನ್ನು ರಚಿಸಲು ಸದಾವಕಾಶ ಕಲ್ಪಿಸಿಕೊಟ್ಟವು.

ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಲೋಕಾನುಭವವನ್ನು ಸಂಗ್ರಹಿಸಿ ಹೇಳಿದ್ದಾರೆ. ಲೋಕದ ಅರಕೆಗಳನ್ನು ಎತ್ತಿ ಹೇಳುತ್ತ ಆ ಮೂಲಕ ಆ ಕೊರತೆಗಳನ್ನು ತುಂಬುವ ಇತ್ಯಾತ್ಮಕ ಧ್ವನಿ ಇವರದು. ಶರೀರದ ಮೂಲಭೂತ ಅವಶ್ಯಕತೆಗಳಾದ ಹೊಟ್ಟೆ ಬಟ್ಟೆಗಳೊಂದಿಗೆ ಮನಸ್ಸಿನ ಆಹಾರವಾದ ಹರಿಭಕ್ತಿಯ ಕಡೆಗೂ ಜನರ ಗಮನಸೆಳೆದು ಹರಿಭಕ್ತಿಯ ಮೂಲಕ ಮುಕ್ತಿ ಮಹಾನಂದಗಳನ್ನು ಗಳಿಸಿಕೊಳ್ಳಿರೆನ್ನುತ್ತಾರೆ. ಇವರ ಪ್ರಕಾರ ಶುಷ್ಕ ಆಚಾರಗಳು ನಿರರ್ಥಕ. ಮಾರಿ ಮಸಣಿ ಮೊದಲಾದ ಗ್ರಾಮ್ಯದೇವತೆಗಳಿಗೆ ಬಲಿಕೊಡಲು ಕೈಯಲ್ಲಿರುವ ಪುಡಿಗಾಸನ್ನೂ ಕಳೆದುಕೊಳ್ಳಬೇಡಿ. ಪ್ರಾಣಿಹತ್ಯೆ ಮಾಡಿ ನರಕಕ್ಕೆ ಬೀಳಬೇಡಿ, ಬೇವಿನುಡುಗೆಯುಟ್ಟು ಸೇವೆ ಮಾಡಿದರೆ ಮುಕ್ತಿ ಸಿಗುವುದೆಂಬ ಭಾವನೆಯನ್ನು ಬಿಡಿ –ಎಂದು ಮುಂತಾಗಿ ಜನರಿಗೆ ವಿವೇಕ ಹೇಳಿ ಎಚ್ಚರಿಸಿದ್ದಾರೆ.

ಕುಲದ ಹೆಸರಿನಲ್ಲಿ ಮೇಲು-ಕೀಳು ಭಾವನೆಗಳನ್ನು ಬೆಳೆಸಿಕೊಂಡು ಕಿತ್ತಾಡುತ್ತಿದ್ದವರನ್ನು ಕುರಿತು ಸತ್ಯ ಸದಾಚಾರಾದಿ ಮೌಲ್ಯಯುತ ಜೀವನವನ್ನು ನಡೆಸುವ ಆದಿಕೇಶವನ ಭಕ್ತರಿಗೆ ಕುಲವಿಲ್ಲವೆಂದು ತಮ್ಮ ಕೀರ್ತನೆಗಳ ಮೂಲಕ

ಸಾರಿದ್ದಾರೆ. ಅಲ್ಲದೆ, ಆತ್ಮ ಜೀವಗಳನ್ನು ಯಾವ ಕುಲವೆಂದು ಗುರುತಿಸುವಿರಿ ಎಂದು ಮರುಪ್ರಶ್ನೆ ಹಾಕುವ ಮೂಲಕ ಅಂತಹ ಜಗಳಗಂಟರ ಬಾಯಿ ಮುಚ್ಚಿಸಿದ್ದಾರೆ.

ಕುಲದ ಹೆಗ್ಗಳಿಕೆಯಿಂದ ಬೀಗುವ ಅಲ್ಪಮತಿಗಳಿಗೆ 'ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ' ಎಂದು ಪ್ರಶ್ನಿಸಿ ಸೃಷ್ಟಿಯ ಎಲ್ಲಾ ಜೀವಿಗಳೂ ಭೂಮಿಗೆ ಬಂದದ್ದು ಒಂದೇ ರೀತಿಯಲ್ಲಿ, ಒಂದೇ ಮಾರ್ಗದಲ್ಲಿ. ಅದರಲ್ಲಿ ಮೇಲು ಕೀಳುಗಳ ಪ್ರಶ್ನೆಯೇ ಇಲ್ಲ. ಶ್ರೀಹರಿಯ ಭಕ್ತನೇ ಶ್ರೇಷ್ಠ ಕುಲದವನು. ಅವನೇ ನಿಜವಾದ 'ಕುಲಜ' ಎಂದು ಮನಗಾಣಿಸಿದ್ದಾರೆ.

ಕನಕದಾಸರ ಕೆಲವು ಕೀರ್ತನೆಗಳು ಒಗಟಿನ ರೂಪದಲ್ಲಿವೆ. ಇಂತಹ ಕೀರ್ತನೆಗಳಿಗೆ 'ಮುಂಡಿಗೆ' ಎಂಬ ಹೆಸರಿದೆ. ಆಧ್ಯಾತ್ಮಿಕ ವಸ್ತುವುಳ್ಳ ಇಂತಹ ರಚನೆಗಳು ಕನಕದಾಸರಲ್ಲಿ ಉಳಿದ ಹರಿದಾಸರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತದೆ. ಶ್ರೀಹರಿಯ ಮತ್ಸ್ಯ ಕೂರ್ಮಾದಿ ದಶಾವತಾರಗಳನ್ನು ಹೇಳುವ ಮುಂಡಿಗೆಗಳು ಒಂದೇ ಓದಿಗೆ ಗುಟ್ಟು ಬಿಟ್ಟುಕೊಡುವುದಿಲ್ಲ.

ಹೀಗೆ ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಬದುಕು ಹೇಗಿರಬೇಕೆನ್ನುವುದನ್ನೂ ಜನಸಾಮಾನ್ಯರಿಗೆ ತಿಳಿಸಿ ಹೇಳುತ್ತ ಲೋಕಾನುಭವದ ಹಿನ್ನೆಲೆಯಲ್ಲಿ ಜೀವನ ವಿವೇಕವನ್ನು ಬೋಧಿಸಿದ್ದಾರೆ.

# ಅಧ್ಯಾಯ ಮೂರು

# ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ವಿಡಂಬನೆಯ ತೌಲನಿಕ ಅಧ್ಯಯನ

ದಾಸಸಾಹಿತ್ಯವು ಜನಮುಖಿ ಆಂದೋಲನದ ಹಾದಿಯಲ್ಲಿ ಸಾಗಿದಂಥವು. ಹಾಗಾಗಿ ಈ ಸಾಹಿತ್ಯದಲ್ಲಿ ಸಾಮಾಜಿಕ ವಿಡಂಬನೆಯೇ ಹೆಚ್ಚು. ಪುರಂದರದಾಸ ಮತ್ತು ಕನಕದಾಸರು ನಮಗಿಂದು ಮುಖ್ಯವೆನಿಸುವುದು ಅವರು ರೂಪಿಸಿದ ಭಕ್ತಿಯ ತಾತ್ವಿಕತೆ ಮಾತ್ರವಲ್ಲ, ಅವು ಪ್ರತಿಬಿಂಬಿಸುವ ಸಮಾಜಮುಖಿ ಚಿಂತನೆಗಳು ಹಾಗೂ ವಿಡಂಬನೆಗಳು ವಾಸ್ತವ ಸಮಾಜವನ್ನು ಒಂದು ಮೌಲ್ಯಯುತ ಸಮಾಜವಾಗಿ ಕಟ್ಟುಬಯಸುತ್ತವೆ ಎಂದು ಹೇಳಿದರೆ ಅತಿಶಯೋಕ್ತಿಯಲ್ಲ.

### ೩.೧ ಡಾಂಬಿಕ ಭಕ್ತಿಯ ವಿಡಂಬನೆ:

ಕರ್ನಾಟಕ ಸಂದರ್ಭದಲ್ಲಿ ಬಹಳ ಮುಖ್ಯವಾಗಿ ಭಕ್ತಿ ಚಳುವಳಿಗಳು ಮಾಡಿದ ಸಾಮಾಜಿಕ ಸುಧಾರಣೆ ಅಸಾಧಾರಣವಾದದ್ದು. ಅಂಥಹ ಸುಧಾರಣೆಯ ಸಂದರ್ಭದಲ್ಲಿ ಅನೇಕ ಜನರು ಮನಃಪೂರಕವಾಗಿ ಭಕ್ತಿ ಇಲ್ಲದೆ ಹೋದರೂ ಸಹ ಜನ ತೋರಿಕೆಗಾಗಿ ಬಹಳ ಮಂದಿ ವಿಭೂತಿ, ಪೂಜೆ, ಮಡಿಯ ಹೆಸರಲ್ಲಿ ಭಕ್ತರಾಗಿ ಅನಾಚಾರಗಳನ್ನು ಮಾಡುತ್ತಿದ್ದರು. ಪ್ರಸ್ತುತದಲ್ಲಿ ಕೆಲ ಮತಮಾನ್ಯಗಳಲ್ಲಿ ಈ ಪರಿಯ ವಿಧ್ವಂಸಕ ಕೃತ್ಯಗಳು ನಡೆಯುತ್ತವೆ. ಇಂತಹ ಡಾಂಭಿಕತನವನ್ನು ದಾಸಸಾಹಿತ್ಯದ ಒಳಗೆ ಪುರಂದರದಾಸ ಮತ್ತು ಕನಕದಾಸರು ಪರಿಯಾಗಿ ವಿಡಂಬಿಸಿದ್ದಾರೆ.

ಹಲವು ಕಾಲ ಕಲ್ಲು ನೀರೊಳಗಿದ್ದರೇನು
ಬಲು ನೆನೆದಮೃತ ಶಿಲೆಯಾಗುವುದೆ
ಕರದಲಿ ಜಪಮಾಲೆ ಮಣಿಗಳನೆಣಿಸುತ
ಪರನಿಂದೆ ಬಾಯಲಿ ಮಾಡುವರಯ್ಯ

*(ಪುರಂದರದಾಸರು)*

ಇಲ್ಲಿ ಪುರಂದರದಾಸರು ಒಬ್ಬ ಮಹಾಭಕ್ತ ಅಥವಾ ಗುರುವೆನಿಸಿಕೊಂಡು ಸಮಾಜ ಹಿತವನ್ನು ಬಯಸುವ ವ್ಯಕ್ತಿಯೇ ಬೇರೆಯವರನ್ನು ನಿಂದಿಸುವುದನ್ನು ಪ್ರಶ್ನಿಸುತ್ತ. ಮೇಲಿನ ಉಪಮಾನವನ್ನು ಪ್ರಶ್ನಾರ್ಥಕವಾಗಿಯೇ ಹೇಳಿದ್ದಾರೆ. ಅಂದರೆ ಹಲವು ಕಾಲ ಕಲ್ಲು ಹೇಗೆ ನೀರೊಳಗಿದ್ದರೂ ಕೂಡ ಅಮೃತಶಿಲೆಯಾಗುವುದಿಲ್ಲವೋ

ಹಾಗೆಯೆ ದುರುಳರು ಯೋಗಿಯಾಗಿಯೂ ಕೂಡ ಉತ್ತಮರಾಗಲು ಸಾಧ್ಯವಿಲ್ಲ ಎಂಬುದು ಈ ಕೀರ್ತನೆಯ ವಿಡಂಬನೆಯಾಗಿದೆ.

ಇಲ್ಲಿಯ ಭಕ್ತಿ ಎಂಬುದು ಹುಸಿಯಾಗಿದೆ.

ಕಾಕು ಇಂದ್ರಿಯಗಳೆಂಬ ಕಟುಕರಿಗೆ ನಾ ಸಿಲುಕಿ
ಮೇಕೆಯಂದದಿ ಬಾಯ ಬಿಡುತಿಪ್ಪೆನು
ಸಾಕಾರ ರೂಪ ಸರ್ವೋತ್ತಮನೆ ನೀ ಕರು
ಣಾಕರನೆಂಬ **ಪೆಂಪುಂಟಾದಪೀಗೆನ್ನ**

*(ಕನಕದಾಸರು)*

ಇಲ್ಲಿ ಆತ್ಮವಿಮರ್ಶೆಯೊಂದಿಗೆ ಮೇಕೆಯಂತೆ ಬಾಯಿಬಿಡುವ ಜನರ ಡಾಂಭಿಕ ಭಕ್ತಿಯನ್ನು ಕನಕದಾಸರನ್ನೊಳಗೊಂಡಂತೆ ಹಲವರು ವಿಮರ್ಶೆ ಮಾಡಿದ್ದಾರೆ.

ಕಾವಿಯನುಟ್ಟು ತಿರುಗುವಿರಲ್ಲ ಕಾಮವ ಬಿಡಲಿಲ್ಲ
ನೇಮನಿಷ್ಠೆಗಳ ಮಾಡುವಿರಲ್ಲ ತಾಮಸ ಬಿಡಲಿಲ್ಲ
ತಾವೊಂದರಿಯದೆ ಆಗಮ ತಿಳಿಯದೆ
ಶ್ವಾನನ ಕುಳಿಯಲಿ ಬೀಳುವಿರಲ್ಲ

*(ಪುರಂದರದಾಸರು)*

ಈ ಕಾಮ–ಮೋಹಗಳು ಮನುಷ್ಯನನ್ನು ಶತ–ಶತಮಾನಗಳಿಂದ ಆವರಿಸಿರುವುದು ಆಶ್ಚರ್ಯಕರ ಮಾತಲ್ಲ. ಆದರೆ ಇಲ್ಲಿ ಕಾವಿತೊಟ್ಟ ಯೋಗಿಗಳು ಕೂಡ ಇದರಿಂದ ಮುಕ್ತರಾಗಿಲ್ಲ. ಭಕ್ತಿಯ ಹೆಸರಲ್ಲಿ ಅನೇಕ ಹೆಣ್ಣುಮಕ್ಕಳನ್ನು ಶೋಷಿಸಿರುವ ಕುರುಹುಗಳು ಈ ಕೀರ್ತನೆಯ ಮೂಲಕ ಗೋಚರಿಸುತ್ತವೆ. ಭಕ್ತಿಯ ಹೆಸರಿನಲ್ಲಿ ಕಾವಿಧಾರಿಗಳು ಇಂದಿಗೂ ಕೂಡ ಸ್ತ್ರೀಯರ ಮಾನ ಹಾಳು ಮಾಡುತ್ತಿರುವುದು ಮಾಧ್ಯಮಗಳಲ್ಲಿ ದಿನ–ದಿನಕ್ಕೂ ದ್ವಿಗುಣಗೊಳ್ಳುತ್ತಿವೆ. ಇಂತಹ ಕಾವಿಧಾರಿಗಳನ್ನು ನಾಯಿಗೆ ಹೋಲಿಸಿ ಜರಿದಿದ್ದಾರೆ.

ಜಪವ ಮಾಡಿದರೇನು ತಪವ ಮಾಡಿದರೇನು
ವಿಪರೀತ ಕಪಟಗುಣ ಕಲುಷವಿದ್ದವರು
ಅಲ್ಲಾ ಖುದಾ ಎಂಬ ಅರ್ಥವನು ಅರಿಯದೆ
ಮುಲ್ಲಾಶಾಸ್ತ್ರದ ನೆಲೆಯ ಗುರುತರಿಯದೆ
ಕಳ್ಳಕೂಗನೆ ಕೂಗಿ ಬೊಗಳಿ ಬಾಯ್ದೆರೆವಂಥ
ಕಳ್ಳರಿಗೆ ತಾ ವೀರಸ್ವರ್ಗ ದೊರಕುವುದೆ?

*(ಕನಕದಾಸರು)*

ಕನಕದಾಸರು ಇಲ್ಲಿ ಜಪ-ತಪ, ಅಲ್ಲಾ-ಖುದಾ ಎಂದು ಕಳ್ಳಕೂಗನೆ ಕೂಗುತ್ತ ಬೊಗಳುತ್ತ ಮನಸ್ಸೊಳಗೆ ವಿಪರೀತ ಕಪಟ ಗುಣವಿದ್ದುಕೊಂಡವರಿಗೆ ಮುಕ್ತ ದೊರೆಯುವುದಿಲ್ಲವೆಂದೂ ಡಾಂಬಿಕ ಬೊಗಳುದಾಸರಿಗೆ ವೀರಸ್ವರ್ಗ ಎಂದಿಗೂ ದೊರಕುವುದಿಲ್ಲ ಎಂದಿದ್ದಾರೆ.

ಕೊರಳೊಳು ಮಾಲೆಯ ಧರಿಸಿದರಿಲ್ಲ
ಬೆರಳೊಳು ಜಪಮಣಿ ಎಣಿಸಿದರಿಲ್ಲ
ಮರುಳನಂತೆ ಶರೀರಕೆ ಬೂದಿಯ
ಒರಸಿಕೊಂಡು ತಾ ತಿರುಗಿದರಿಲ್ಲ

*(ಪುರಂದರದಾಸರು)*

ಕೊರಳೊಳು ಮಾಲೆ, ಬೆರಳೊಳು ಜಪಮಣಿ, ಶರೀರಕೆ ಬೂದಿ ಇವುಗಳಿಂದ ಮುಕ್ತಿ ದೊರೆಯುವುದಿಲ್ಲ. ಮನುಷ್ಯನಿಗೆ ಬೇರೆಯವರನ್ನು ಗೌರವಿಸುವ ಪ್ರೀತಿಸುವ, ಸಹಾಯ ಹಸ್ತ ನೀಡುವ ಮೌಲಿಕ ಗುಣಗಳು ಸಿದ್ಧಿಸಿದರೆ ಮಾತ್ರ ಮುಕ್ತಿ ಎಂಬ ಭಾವವು ಈ ಕೀರ್ತನೆಯಲ್ಲಿ ನಮಗೆ ತಿಳಿದು ಬರುತ್ತದೆ.

ವೇದೋಕ್ತ ಪೂಜೆಯಲಿ ತೃಪ್ತಿಪಡಿಸದಿರೆ
ಆದುದೇನು ಅದರಿಂದ ಫಲವಾವುದು
ನಾದವ ಕೇಳ್ದ ಹರಿಣನಂತೆ ಕೆಡದೆ ಮಧು
ಸೂದನನ ನಾಮಸ್ಮರಣೆಯ ಮಾಡೊ

*(ಕನಕದಾಸ)*

'ವೇದ ಉಪನಿಷತ್ತುಗಳನ್ನು ಕುರಿತು, ಪೂಜೆಯ ಮಾಡಿದರೇನು ಫಲವಿಲ್ಲವೆಂದು ಕಟುವಾಗಿ ಹೇಳಿ ಸ್ಮರಣೆಯನ್ನು ಮನಃಪೂರ್ವಕವಾಗಿ ಮಾಡಿದರೆ ಮುಕ್ತಿ ಖಂಡಿತವಾಗಿಯೂ ದೊರೆಯುತ್ತದೆಂಬ ಭಾವವು ನಮಗೆ ಮೇಲುನೋಟಕ್ಕೆ ಕಾಣಿಸಿದರೂ ಇದರ ಹಿಂದೆ ಇರುವ ಭಾವವೂ ಬೇರೆಯೇ ಇದೆ. ಹದಿನೈದು-ಹದಿನಾರನೆಯ ಶತಮಾನದಲ್ಲಿ ಕೇವಲ ಮಂತ್ರ ಪಠಿಸಿದವರಿಗೆ ಮಾತ್ರ ಮುಕ್ತಿ ದೊರೆಯುತ್ತದೆಂಬ ನಂಬಿಕೆಯನ್ನು ಜನರಿಗೆ ತಿಳಿಸುತ್ತ ಜನಸಾಮಾನ್ಯರೂ ಕೂಡ ಭಕ್ತಿಯಿಂದ ಮುಕ್ತಿ ಪಡೆಯಬಹುದೆಂದು ಸಾರಿದರು.

ಶ್ವಾನ ಬೂದಿಯೊಳಿರಲು ಶಿವಭಕ್ತನೆನಬಹುದೆ
ಕಾನನದೊಳಿಹ ಕಾಗೆ ವನವಾಸಿಯೆ

ಗಾಣ ತಿರುಗಲು ಎತ್ತು ದೇಶಯಾತ್ರೆ ಎನ್ನಬಹುದೆ ಬಕ
ಧ್ಯಾನವನು ಮಾಡಲು ಮೋಕ್ಷವೆ ಕೃಷ್ಣ

*(ಪುರಂದರದಾಸ)*

ಮಧ್ಯಯುಗದಲ್ಲಿ ಪ್ರಮುಖವಾಗಿ ಧರ್ಮ-ಧರ್ಮಗಳ ನಡುವೆ ಕೆಸರೆರಚುವ ಕೃತ್ಯಗಳು ನಡೆದಿವೆ. ಕಾರಣ ಅಂದಿನ ಧಾರ್ಮಿಕ, ಸಾಮಾಜಿಕ ಪರಿಸ್ಥಿತಿಗಳೆ ಹಾಗೇ ಮಾಡಿದ್ದವು. ಇಲ್ಲಿ ವೀರಶೈವರಲ್ಲಿ ಇದ್ದ ಭ್ರಷ್ಟ ಭಕ್ತರನ್ನು ಕುರಿತು ಹೀಗೆ ಹೇಳಿರಬಹುದು. ಪುರಂದರದಾಸರಲ್ಲಿ ಉಪಮೇಯ-ಉಪಮಾನಗಳೇ ಹೆಚ್ಚು. ಅವರ ಸಾಕಷ್ಟು ವಿಡಂಬನಾತ್ಮಕ ಅಂಶಗಳಲ್ಲಿ ಇವನ್ನು ಕಾಣಬಹುದು. ಗಾಣ ತಿರುಗಲು ಎತ್ತು ದೇಶಯಾತ್ರೆ ಎನಬಹುದೆ. ಕಾನನದೊಳಿಹ ಕಾಗೆ ವನವಾಸಿಯೆ ಈ ಉದಾಹರಣೆಗಳಂತೂ ಅವರ ಅದ್ಭುತ ಪ್ರತಿಭೆಗೆ ಹಿಡಿದ ಕನ್ನಡಿಯಾಗಿವೆ.

ಹರಿಹರರ ಪೂಜೆಗಳು ಹಗರಣಗಳಾದವು
ಉರಿ ಮಾರಿ ಚಾಮುಂಡಿ ಶಕ್ತಿಗಳಿಗೆ
ಕುರಿ ಕೋಣ ನೈವೇದ್ಯ ಧೂಪದೀಪಗಳಿಂದ
ಪರಮ ಭಕ್ತಿಯ ಸಲಿಸಿ ಪೂಜಿಸುವರಯ್ಯ

*(ಕನಕದಾಸರು)*

ಕನಕದಾಸರ ಕೀರ್ತನೆಗಳಲ್ಲಿ ಹೆಚ್ಚು ಕಾಣಸಿಗುವುದು ವೈಚಾರಿಕ ವಿಚಾರಗಳು. ಹಾಗೆ ನೋಡಿದರೆ ಪುರಂದರದಾಸರಿಗಿಂತ ಹೆಚ್ಚು ವೈಚಾರಿಕವಾಗಿ ಮೌಢ್ಯತೆಯನ್ನು ಡಾಂಬಿಕ ಭಕ್ತಿಯ ಹಿನ್ನೆಲೆಯಲ್ಲಿ ವಿಡಂಬಿಸಿದ್ದಾರೆ. ಕುರಿ-ಕೋಣ ಬಲಿ ಕೊಡುವುದು, ಧೂಪ ಪೂಜೆಗಳನ್ನು ಕನಕದಾಸರು ವಿರೋಧಿಸುತ್ತಾರೆ. ಇಲ್ಲಿಯೂ ಕೂಡ ಭಕ್ತಿಯೇ ಎದ್ದು ಕಾಣುವ ವಿಷಯವಾಗಿದೆ. ಇಲ್ಲಿ ಆಚರಣೆಗಳನ್ನು ವಿರೋಧಿಸುತ್ತಿರುವುದು ಕಂಡುಬರುತ್ತದೆ. ಇದಕ್ಕೆ ಪೂರಕವಾಗಿ ಪುರಂದರದಾಸರ ಇನ್ನೊಂದು ಕೀರ್ತನೆ ಹೀಗಿದೆ:

ತೋಳ ಅಡವಿಯ ತಿರುಗೆ ದಿಗಂಬರ ಎನಬಹುದೆ
ಗಾಳಿಯುಂಬ ಭುಜಗ ಉಪವಾಸಿಯೆ
ಆಲದಲಿ ಜಡೆಯಿರಲು ಅದು ತಪಸಿ ಎನಬಹುದು
ಕಾಲದಲ್ಲಹ ಗೂಗೆ ಹಿರಿಯದಾಗಬಹುದೆ

*(ಪುರಂದರದಾಸರು)*

ಪುರಂದರದಾಸರು ವಿಡಂಬನೆಗೆ ಪ್ರಾಕೃತಿಕ ವಸ್ತುಗಳನ್ನೆ ಉಪಮಾನವಾಗಿ ತರುತ್ತಾರೆ. ಇದಕ್ಕೆ ಕಾರಣ ಅಂದಿನ ಕಾಲದ ಪ್ರಾಕೃತಿಕ ಸಂಪತ್ತು ಹಾಗೂ ಹೇರಳವಾದ ಪಕ್ಷಿ ಪ್ರಾಣಿ ಸಂಕುಲ. ಜೈನ, ವೀರಶೈವ, ವೈದಿಕ ಧರ್ಮದ ಡಾಂಭಿಕ ಧರ್ಮಪ್ರಚಾರಕರನ್ನು ಪರೋಕ್ಷವಾಗಿ ವಿಡಂಬಿಸಿದ್ದಾರೆ.

**ತೂಳದವರ** ಮಾತ ಕೇಳಿ ಖೂಳರೆಲ್ಲ ಕೂಡಿಕೊಂಡು
ಹಾಳು ಮಾಡಿ ಕೈಯಲ್ಲಿದ್ದ ಹೊನ್ನು ಹಣಗಳ
ಬಾಳುತಿಪ್ಪ ಕೋಣ ಕುರಿಯ ಏಳಬೀಳ ಕೊರಳ ಕೊಯ್ದು
ಬೀಳ ಬೇಡಿ ನರಕಕೆಂದು ಹೇಳಿ ಬಂದೆನು

*(ಕನಕದಾಸರು)*

ಕನಕದಾಸರ ವೈಚಾರಿಕತೆಯ ಹಿನ್ನೆಲೆಯಲ್ಲಿ ರಚನೆಯಾದ ಕೀರ್ತನೆಗಳಲ್ಲಿ ಇದೂ ಒಂದು. ಈ ಕೀರ್ತನೆ ಕೇವಲ ವೈಚಾರಿಕ ಪ್ರಜ್ಞೆಯಿಂದ ಮಾತ್ರವಲ್ಲದೆ ಪ್ರಾಣಿದಯೆಯಿಂದ ಕೂಡಿದೆ. ಪ್ರಾಣಿಬಲಿಯಿಂದ ಪಾಪ ಬರುತ್ತದೆಂದು ಜನರಲ್ಲಿ ಭಯದ ವಾತಾವರಣ ನಿರ್ಮಿಸಿ ಪ್ರಾಣಿಸಂಕುಲದ ನಾಶವನ್ನು ತಪ್ಪಿಸುವ ಪ್ರಯತ್ನವನ್ನೂ ಕನಕದಾಸರು ಮಾಡಿದ್ದಾರೆ. ಪ್ರಸ್ತುತ ಪ್ರಪಂಚದಲ್ಲಿ ಇಂತಹ ಚಿಂತನೆಗಳು ಕಡಿಮೆಯಾಗಿರುವುದರಿಂದ ಕೆಲವು ಪ್ರಾಣಿಗಳು ನಿಶ್ಶೇಷವಾಗಿವರ, ಇನ್ನು ಕೆಲವು ವಿನಾಶದ ಅಂಚಿನಲ್ಲಿವೆ. ಅಷ್ಟೆ ಅಲ್ಲ ಕನಕದಾಸರು ಪ್ರಾಣಿಬಲಿ ಕೊಡುವುದು ಡಾಂಬಿಕ ಭಕ್ತಿಯೆಂದು ವಿಡಂಬಿಸಿದ್ದಾರೆ.

ಪುರಾಣ ಹೇಳುವ ಪುಂಡ
ಅವ ಮದ್ಯದ ಹರವಿಯ ಕೊಂಡ
ಮುಂದುಗಾಣದೆ ಮೋಕ್ಷಣ ಬೊಗಳುವ
ಬರಿಯ ಮಾತಿನ ಭಂಡ

*(ಪುರಂದರದಾಸ)*

ಸಮಾಜದಲ್ಲಿ ಕೆಲವರು 'ನಾವು ಹೇಳಿದಂತೆ ಮಾಡಿ ನಾವು ಮಾಡಿದಂತೆ ಮಾಡಬೇಡಿ' ಎಂಬ ಜಾಣತನದ ಮಾತು ಈ ಮೇಲಿನ ಕೀರ್ತನೆಯಲ್ಲಿ ಇದೆ. 'ಮಾಡೋದು, ಅನಾಚಾರ ಮನೆ ಮುಂದೆ ಬೃಂದಾವನ' ಎಂಬ ಗಾದೆಗಳಿಗೆ ಹತ್ತಿರವಾದ ಕೀರ್ತನೆ. ಬೇರೆಯವರಿಗೆ ನೀತಿ ಹೇಳುತ್ತ ಸಂಜೆಯಾದ ತಕ್ಷಣ ಕುಡಿದು ನುಡಿಯುವರನ್ನು ಪುರಂದರದಾಸರು **ಪುಂಡ** ಮತ್ತು ಭಂಡ ಎಂಬ ಮಾತುಗಳು ಹೆಚ್ಚು ಅರ್ಥಪೂರ್ಣವಾಗಿದೆ.

ಖಂಡವನು ಕೊಯ್ದು ಕೊಡಬೇಡ ದುಳ್ಳುರಿಯಗ್ನಿ
ಕುಂಡವನು ಹೊಕ್ಕು ಹೊರಡುವುದುಚಿತವೆ
ಭಂಡರಂದದಿ ಬತ್ತಲೆ ಬರುವುದಾಗಲಾಟ
ಪುಂಡಲೀಕಾಕ್ಷನ ನೆನೆ ಕಾಣೋ ಮನವೆ

*(ಕನಕದಾಸರು)*

ಈ ಕೀರ್ತನೆ ಕೂಡ ಪ್ರಾಣಿಬಲಿ ಕೇಂದ್ರಿತವಾದದ್ದು. ವೇದಗಳ ಕಾಲದಿಂದ ಭಾರತೀಯ ಸಮಾಜದಲ್ಲಿ ಯಜ್ಞ ಯಾಗಾದಿಗಳಿಗೆ ಪ್ರಾಣಿಗಳನ್ನರ್ಪಿಸುವುದು ವಾಡಿಕೆಯಾಗಿತ್ತು. ಇದನ್ನು ವಚನ ಚಳುವಳಿ ಮತ್ತು ದಾಸಸಾಹಿತ್ಯ ನೇರವಾಗಿ ವಿರೋಧಿಸಿತು. ಅದರಲ್ಲಿಯು ಕನಕದಾಸರ ಪಾತ್ರ ದೊಡ್ಡದು. ಪುರಂದರದಾಸರು ಕುಡಿದು ಹುಸಿನುಡಿವವರನ್ನು ಭಂಡ ಎಂದು ಕರೆದರೆ, ಕನಕದಾಸರು ಪ್ರಾಣಿವಧೆ ಮಾಡಿ ಯಜ್ಞ, ಪೂಜೆ ಮಾಡುವವರನ್ನು ಭಂಡ ಎಂದು ಕರೆದಿದ್ದಾರೆ. ಒಟ್ಟಾರೆ ಇವರೀರ್ವರ ಅಭಿಪ್ರಾಯ ನಿಶ್ಕಲ್ಮಷವಾದ ಮಾನಸಿಕ ಭಕ್ತಿಯೇ ಮುಕ್ತಿಯ ಮಾರ್ಗವೆ ವಿನಾ ಇಂತಹ ಅನಿಷ್ಟ ಆಚರಣೆಗಳೆಲ್ಲ ಡಾಂಬಿಕಭಕ್ತಿ ಎಂಬುದಾಗಿ ವಿಡಂಬಿಸಿದ್ದಾರೆ.

ತೀರ್ಥಯಾತ್ರೆಯನೆಲ್ಲ
ತಿರುಗಿ ಸೊರಗಿದೆನಲ್ಲ
ತೀರ್ಥದಲ್ಲಿ ಮುಳುಗಿದ್ದೊಂದೆ
ಮನವ ತೊಳೆಯಲಿಲ್ಲ

*(ಪುರಂದರದಾಸ)*

ಪುರಂದರದಾಸರು ಅಲ್ಪದರಲ್ಲಿಯೆ ಅಗಾಧವಾದುದ್ದನ್ನು ಹೇಳಿದ್ದಾರೆ. ಸಮಾಜದಲ್ಲಿ ಅನೇಕರು ತೀರ್ಥಯಾತ್ರೆಗೆ ಹೋಗಿ ಪ್ರಸಾದ ತೀರ್ಥಗಳನ್ನು ಸೇವಿಸುತ್ತಾರೆ, ಹಂಚುತ್ತಾರೆ. ಆದರೆ ಮನಸ್ಸಿನಲ್ಲಿರುವ ಕಾಮ–ಕ್ರೋಧ, ಮದ–ಮತ್ಸರಗಳನ್ನು ಬಿಟ್ಟು ಬದುಕುವುದಿಲ್ಲ, ಅಷ್ಟೆ ಅಲ್ಲ ಬದುಕಿನಲ್ಲಿ ಇತರರನ್ನು ತಮ್ಮಂತೆ ಎಂದು ಭಾವಿಸಿ ಬದುಕಿರುವವರ ಸಂಖ್ಯೆ ಬಹಳ ವಿರಳ. ಈ ರೀತಿ ದೇವಸ್ಥಾನ ಯಾತ್ರೆ ಮಾಡಿದ್ದರೆ ಫಲ ಯಾವುದೆಂದು ಕೂಡ ಪ್ರಶ್ನಿಸುತ್ತಾರೆ. ಇದೇ ಡಾಂಭಿಕ ಭಕ್ತಿ. ಭಕ್ತಿಯ ಹೆಸರಿನಲ್ಲಿ ಇವೆಲ್ಲವನ್ನು ಮಾಡಿದರೂ ಮನುಷ್ಯ ಅಳವಡಿಸಿಕೊಳ್ಳಬೇಕಾದ ನಿಜ ಮೌಲ್ಯವನ್ನು ಮೈಗೂಡಿಸಿಕೊಳ್ಳದಿರುವುದು ಆಶ್ಚರ್ಯಕರವಾದ ಸಂಗತಿ. ಇದಕ್ಕೆ ಪೂರಕವಾಗಿ ಪುರಂದರದಾಸರ ಮತ್ತೊಂದು ಕೀರ್ತನೆ ಹೀಗಿದೆ.

ಗೂಟನಾಮವ ಹೊಡೆದು ಗುಂಡು ತಂಬಿಗೆ ಹಿಡಿದು
ಗೋಟಂಚು ಧೋತರ ಮಡಿಯನುಟ್ಟು
ದಾಟು ಕಾಲಿಡುತ ನಾ ಧರೆಯೊಳಗೆ ಬರಲೆನ್ನ
ಬೂಟಕತನ ನೋಡಿ ಭ್ರಮಿಸದಿರಿ ಜನರೆ

*(ಪುರಂದರದಾಸರು)*

ಪುರಂದರದಾಸರ ಗೂಟನಾಮವ ಹೊಡೆದುಕೊಂಡಿರುವರು ಮತ್ತು ಗೋಟಂಚು ಧೋತರ ಮಡಿಯನುಟ್ಟು ಬದುಕುವ ಜನರನ್ನು ಅವರೇ ಬೂಟಕತನದ ಜನರೆಂದು ಕರೆದಿದ್ದಾರೆ. ಅವರ ಸಮಕಾಲೀನ ಸಮಾಜದಲ್ಲಿ ಜನರು ಹೇಗೆಲ್ಲ ಜನರನ್ನು ಮೋಸಗೊಳಿಸುತ್ತಿದ್ದರು. ದೇವರು, ಧರ್ಮ, ನಂಬಿಕೆ, ಭಕ್ತಿ ಈ ಎಲ್ಲಾ ಆಚರಣೆಗಳ ಮೂಲಕ ಸಾಮಾನ್ಯ ಜನರನ್ನು ಮರುಳು ಮಾಡಿರುವ ಎಲ್ಲಾ ಸಾಧ್ಯತೆಗಳು ಸಂಕ್ಷಿಪ್ತವಾಗಿ ಇವರ ಕೀರ್ತನೆಗಳಲ್ಲಿ ವಿಡಂಬನೆಗಳ ಮೂಲಕ ಕಂಡುಬರುತ್ತವೆ. ಮಾನವೀಯತೆಯ ಬಗ್ಗೆ ಪುರಂದರದಾಸರು ಪದೇ ಪದೆ ಧ್ವನಿ ಎತ್ತುತ್ತಾರೆ.

ಮಂಡೂಕ ಕೂಗಲದು ಮಂತ್ರವೆಂದೆನಬಹುದೆ
ಗುಂಡು ನೀರೊಳಗಿರಲು ಅದು ಸ್ನಾನವೆ
ಪುಂಡರೀಕಾಕ್ಷ ಸಿರಿ ಪುರಂದರ ವಿಠಲನ್ನ
ಕಂಡು ಭಜಿಸಿದವನು ಅವ ಮನುಜನೆ *(ಪುರಂದರದಾಸರು)*

ಪುರಂದರದಾಸರು ಇಲ್ಲಿ ನೇರವಾಗಿ ಪುರಂದರವಿಠಲನನ್ನು ಪೂಜಿಸದವರು ಮನುಜರೆ ಅಲ್ಲ ಎಂದು ತನ್ನ ನಿಜ ದೈವವನ್ನು ಹರಸಿದ್ದಾರೆ. ಮಂಡೂಕ ಕೂಗಲದು ಮಂತ್ರವೆ? ಗುಂಡು ನೀರೊಳಗಿರಲು ಅದು ಸ್ನಾನವೆ? ಎಂಬ ಪ್ರಶ್ನೆಗಳು ಮಂತ್ರ ಹೇಳುತ್ತ ಪುರಂದರದಾಸರು ಇಲ್ಲಿ ನೇರವಾಗಿ ಪುರಂದರವಿಠಲನನ್ನು ಪೂಜಿಸದವರು ಮನುಜರೇ ಅಲ್ಲ ಎಂದು ತನ್ನ ನಿಜದೈವವನ್ನು ಹರಸಿದ್ದಾರೆ. ಮಂಡೂಕ ಕೂಗಲದು ಮಂತ್ರವೆ? ಗುಂಡು ನೀರೊಳಗಿರಲು ಅದು ಸ್ನಾನವೆ? ಎಂಬ ಪ್ರಶ್ನೆಗಳು ಮಂತ್ರ ಹೇಳುತ್ತ ಮನಸ್ಸಿನಲ್ಲಿ ಕೆಟ್ಟದ್ದನ್ನು ಬಯಸುವ, ದೇವಸ್ಥಾನದಲ್ಲಿದ್ದು ಅನೇಕ ದುಷ್ಕೃತ್ಯ ಎಸಗುವ ಜನರನ್ನು ಕುರಿತು ಹೇಳಿರುವ ಕೀರ್ತನೆ ಇದು. ಅಂದಿನ ಸಮಾಜದಲ್ಲಿ ಭಕ್ತಿಯ ಹೆಸರಿನಲ್ಲಿ ದೇವದಾಸಿ ಪದ್ಧತಿಗಳು ಹುಟ್ಟಿಕೊಂಡು ನಂತರ ಸ್ತ್ರೀ ಶೋಷಣೆಯ ಮುಖಗಳಾಗಿ ರೂಪಗೊಂಡ ಸಂದರ್ಭಗಳನ್ನು ಈ ಮೇಲಿನ ಹಿನ್ನೆಲೆಯಲ್ಲಿ ಗ್ರಹಿಸಬಹುದು. ಒಟ್ಟಾರೆ ೧೫–೧೬ನೇ ಶತಮಾನದ ಭಕ್ತಿಯ ಹಿನ್ನೆಲೆಯಲ್ಲಿ

ನಡೆದಿರಬಹುದಾದ ಎಲ್ಲಾ ತರಹದ ಶೋಷಣೆಯನ್ನೇ ಪ್ರತಿಮಾತ್ಮಕವಾಗಿ ಪುರಂದರದಾಸರು ಹೇಳಿದ್ದಾರೆ.

ನೇಮವನು ತಾಳುವರು ದಾನವ ಮಾಡುವರು
ಕಾಮ ಕ್ರೋಧ ಮದ ಮತ್ಸರ ಬಿಡದೆ ಇಂಥ
ನಾಯಿ ಕುನ್ನಿಗಳ ಕಂಡೊಳಗಿಟ್ಟುಕೊಂಡರೆ
ಕಾಶಿಯಲಿ ಮುಳುಗಿದ ಫಲವೇನಯ್ಯ *(ಪುರಂದರದಾಸರು)*

ಮನುಷ್ಯ ಸರ್ವೋತ್ತಮನಾಗಲು ಪ್ರಮುಖವಾಗಿ ಕಾಮ, ಕ್ರೋಧ, ಮದ, ಮತ್ಸರಗಳು ನಾಶವಾಗಬೇಕು. ಆದರೆ ಅಂದಿನಿಂದ ಇಂದಿನತನಕ ಸಾಮಾನ್ಯರಿಂದ ಹಿಡಿದು ಮಠಮಾನ್ಯಗಳ ಗುರು ಹಿರಿಯರಾರನ್ನೂ ಇವು ಬಿಟ್ಟಿಲ್ಲ. ಅವರೂ ಇವನ್ನು ಬಿಟ್ಟಿಲ್ಲ. ಇವನ್ನು ಮೈಗೆ, ಮನಸ್ಸಿಗೆ ಅಂಟಿಸಿಕೊಂಡು ಕಾಶಿಯಲಿ ಭಕ್ತಿಯಿಂದ ಮುಳುಗುವುದು ನಿರರ್ಥಕ ಇದೇ ಡಾಂಬಿಕ ಭಕ್ತಿ ಎಂಬುದು ಪುರಂದರದಾಸರ ಅಭಿಪ್ರಾಯ. ಕನಕದಾಸರು ಡಾಂಭಿಕ ಭಕ್ತಿಗೆ ಬದಲಾಗಿ ಹೀಗೆ ಇರಬೇಕೆಂದು ಬಯಸುತ್ತಾರೆ.

ದಾನಧರ್ಮ ಪರೋಪಕಾರವ ಮಾಡು
ದೀನನಾಗಿ ನೀ ಕೆಡಬೇಡವೊ
ಜ್ಞಾನವಿಲ್ಲದೆ ಹೀನ ದೈವವ ಭಜಿಸಲು
ಏನುಂಟು ನಿನಗಿನ್ನು ಎಲೆ ಹುಚ್ಚು ಮನವೆ *(ಕನಕದಾಸರು)*

ದಾನ-ಧರ್ಮ ಮತ್ತು ಜ್ಞಾನ ಮನುಷ್ಯರಿಗೆ ಸಹಕಾರದ ಬದುಕಿಗೆ ಬೇಕಾದ ಮೂಲಾಂಶಗಳು ಅವುಗಳು ಜನರ ನಡುವೆ ಪರಸ್ಪರ ಹಂಚಿಕೆಯಾಗಬೇಕು. ಹಿಂದಿನ ಸಮಾಜದಲ್ಲಿ ಜ್ಞಾನ ಎಂದರೆ ಶಿಕ್ಷಣ ಕೆಲವೇ ವರ್ಗಕ್ಕೆ ಸೀಮಿತವಾಗಿತ್ತು ಅಷ್ಟು ಮಾತ್ರವಲ್ಲ ಸಂಪತ್ತು ಕೂಡ ಕೆಲವೇ ಜನರಲ್ಲಿ ಕ್ರೂಢೀಕರಣವಾಗಿತ್ತು. ತಾರತಮ್ಯತೆ ಎಲ್ಲೆಲ್ಲೂ ಜನಜನಿತವಾಗಿತ್ತು. ಈ ಅಸಮಾನತೆಗಳು ದೂರವಾಗಿ ಸಮಸಮಾಜ ನಿರ್ಮಾಣಗೊಳ್ಳಬೇಕೆಂಬ ಕನಕದಾಸರ ಹಂಬಲ ನಿಜವಾಗಿಯು ಮಾನವಪರ ಧೋರಣೆಗಳು ಬಹಳ ವಿಶೇಷವಾದದ್ದು ಎನ್ನಬಹುದು.

ಹೃದಯದ ಮಲವನು ತೊಳೆಯಲಾರದೆ ವ್ಯರ್ಥ
ಉದಯಾಸ್ತಮಾನ ನೀರೊಳು ಮುಳುಗುವರು
ಅದಕಿಂತ ಸರ್ವದಾ ನೀರೊಳಗಿರುತಿಪ್ಪ
ಮುದಿಕಪ್ಪೆ ಮಾಡಿದ ತಪ್ಪೇ ನಿಶ್ಚಿತ *(ಪುರಂದರದಾಸರು)*

ಮೇಲಿನ ಕೀರ್ತನೆಯು ಹೃದಯ ಶ್ರೀಮಂತಿಕೆ ಇಲ್ಲದ ಭ್ರಷ್ಟ ದೈವಭಕ್ತರನ್ನು ಕುರಿತು ವಿಡಂಬಿಸಿದ್ದಾರೆ. ಮನುಷ್ಯನಿಗೆ ಬೇಕಾದದ್ದು ಮೊದಲು ಹೃದಯ ವಿಶಾಲತೆ ಎನ್ನುವುದು ಈ ಕೀರ್ತನೆಯಿಂದ ತಿಳಿಯುತ್ತದೆ. ಇದಕ್ಕೆ ಒತ್ತಾಸೆಯಾಗಿ ಪುರಂದರದಾಸರ ಮತ್ತೊಂದು ಕೀರ್ತನೆಯನ್ನು ಗಮನಿಸಬಹುದು.

ಮಲದ ತೊಳೆಯಬಲ್ಲರಲ್ಲದೆ
ಮನವ ತೊಳೆಯಬಲ್ಲರೆ
ಹಲವು ತೀರ್ಥಂಗಳಲಿ ಮುಳುಗಿ ಹಲುಬಿದರೆ ಫಲವೇನು

*(ಪುರಂದರದಾಸರು)*

ಹೀಗೆ ಪುರಂದರದಾಸರು ಶುದ್ಧ ಮನಸ್ಸು ಮತ್ತು ಹೃದಯಗಳನ್ನು ತಮ್ಮ ಕೀರ್ತನೆಗಳಲ್ಲಿ ಬಯಸುತ್ತಾರೆ. ಇಂತಹ ವಿಚಾರಗಳು ಸರ್ವಜ್ಞನ ವಚನಗಳಲ್ಲಿ ಕಂಡುಬರುತ್ತವೆ. ಪದೇ ಪದೇ ಪುರಂದರದಾಸರು ನೀರಲ್ಲಿ ಮುಳುಗುವವರ ಬಗ್ಗೆ ಕಿಡಿಕಾರಿದ್ದಾರೆ. ಕಾರಣ ಈ ರೀತಿಯಾಗಿ ಮುಳುಗುವುದರಿಂದ ಫಲವಿಲ್ಲ. ಇವೆಲ್ಲ ಕೇವಲ ಭ್ರಮೆ ಎಂದು ಅನೇಕ ಉದಾಹರಣೆಗಳ ಮೂಲಕ ಸ್ಪಷ್ಟೀಕರಿಸಿದ್ದಾರೆ.

ಮಡಿ ಮಡಿ ಮಡಿಯೆಂದಡಿಗಡಿಗ್ಹಾರುತಿ
ಮಡಿ ಮಾಡುವ ಬಗೆ ಬೇರುಂಟು
ಬಟ್ಟೆಯ ನೀರೊಳಗದ್ದಿ ಒಣಗಿಸಿ
ಉಟ್ಟುಕೊಂಡರೆ ಅದು ಮಡಿಯಲ್ಲ
ಹೊಟ್ಟೆಯೊಳಗಿನ ಕಾಮಕ್ರೋಧವ
ಬಿಟ್ಟು ನಡೆದರೆ ಅದು ಮಡಿಯು

*(ಪುರಂದರದಾಸರು)*

ಇದು ಮೌಢ್ಯ ಮತ್ತು ಡಾಂಭಿಕ ಭಕ್ತಿ ಎರಡೂ ಮೇಳೈಸಿರುವ ಕೀರ್ತನೆಯಾಗಿದೆ. ಪುರಂದರದಾಸರು ಇಲ್ಲಿಯವರೆಗೆ ಸೂಚ್ಯವಾಗಿ ಹೇಳುತ್ತಿದ್ದವರು ಇದ್ದಕ್ಕಿದ್ದ ಹಾಗೆ ನೇರವಾಗಿ ಮಡಿ ಎಂದರೆ ಕಾಮ, ಕ್ರೋಧವ ಬಿಡುವುದೆ ಮಡಿ ಎಂದು ವಾಚ್ಯವಾಗಿ ಹೇಳಿದ್ದಾರೆ. ಇದಕ್ಕೆ ಪೂರಕವಾಗಿ ಕನಕದಾಸರು ಮೌಢ್ಯದ ಬಗ್ಗೆ ಹೀಗೆ ಹೇಳಿದ್ದಾರೆ:

ಸುತ್ತಣವರ ಮಾತಕೇಳಿ ಗುತ್ತಿಯ ಎಲ್ಲಮ್ಮಗೊಲಿದು
ಬತ್ತಲೆಯ ದೇವರೆದುರು ಬರುವುದು ನೋಡಿರೊ

ಮತ್ತೆ ಬೇವಿನುಡಿಗೆಯ ಅರ್ತಿಯಿಂದುಟ್ಟುಕೊಂಡು
ಮುಕ್ತಿ ಕಾಂಬೆವೆಂಬ ಮೌಢ್ಯ ಬೇಡಿರೊ

*(ಕನಕದಾಸರು)*

ಗುತ್ತಿಯ ಎಲ್ಲಮ್ಮನನ್ನು ಪೂಜಿಸುವ ವಿಧಿ ವಿಧಾನಗಳು ಅದರ ಸಾಂಸ್ಕೃತಿಕ ಚಿತ್ರವು ಈ ಕೀರ್ತನೆಯ ಮೂಲಕ ತಿಳಿದು ಬರುತ್ತದೆ. ಪುರಂದರದಾಸರ ಮತ್ತು ಕನಕದಾಸರ ಕೀರ್ತನೆಗಳು ಕೇವಲ ಭಕ್ತಿ, ವಿಡಂಬನೆ, ಸಾಮಾಜಿಕತೆಯನ್ನು ತಿಳಿಸುವುದು ಮಾತ್ರವಲ್ಲದೆ ಅಂದಿನ ಸಮಾಜದ ಸಾಂಸ್ಕೃತಿಕ ಚಿತ್ರಣವನ್ನು ಕಟ್ಟಿಕೊಡುತ್ತವೆ. ಗುತ್ತಿಯ ಎಲ್ಲಮ್ಮನ ಬತ್ತಲೆಯ ಸೇವೆ ನಂತರ ಬೇವಿನುಡಿಗೆಯ ಉಟ್ಟು ಸುತ್ತುವ ಪರಿಯನ್ನು ಮೌಢ್ಯ ಎಂದು ಕನಕದಾಸರು ಸಾರಿದ್ದಾರೆ.

ಹೀಗೆ ಡಾಂಭಿಕ ಭಕ್ತಿಯ ಜೊತೆಗೆ ಜನರ ಮೌಢ್ಯವನ್ನು ಪುರಂದರದಾಸರು ಮತ್ತು ಕನಕದಾಸರು ವಿಡಂಬಿಸಿದ್ದಾರೆ. ಯಾವ ವಚನಕಾರರು, ಕೀರ್ತನಕಾರರು ಇವರಿಬ್ಬರಷ್ಟು ಡಾಂಭಿಕ ಭಕ್ತಿ, ಮೌಢ್ಯವನ್ನು ವಿಡಂಬಿಸಿಲ್ಲ.

**೩.೨ ಪರಸ್ತ್ರೀಯರ ವಿಡಂಬನೆ**

ಪುರಂದರದಾಸರು ಮತ್ತು ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಪರಸ್ತ್ರೀಯರನ್ನು ಬಯಸುವುದು ಉಚಿತವಲ್ಲ ಎಂದು ಸಾರಿದ್ದಾರೆ. ಪರಸ್ತ್ರೀಯರ ವ್ಯಾಮೋಹಕ್ಕೆ ಬಿದ್ದ ಪೌರಾಣಿಕ, ಚಾರಿತ್ರಿಕ ವ್ಯಕ್ತಿಗಳು ಹೇಗೆ ತಮ್ಮ ಬದುಕನ್ನು ಬಲಿಕೊಟ್ಟರೆಂಬುದನ್ನು ಓದಿ–ಕೇಳಿ ಬಲ್ಲೆವು. ಆದರೂ ನಮಗೆ ಪಕ್ಕದ ಮನೆಯವರ ಹೆಂಡತಿಯೆ ಸುಂದರಿ. ಆದಷ್ಟು ಬೇಗ ಆದಷ್ಟು ಹೆಚ್ಚು ಗಳಿಸುವ ತವಕ, ಹಂಬಲಗಳೇ ಲೋಕದ ನಡಾವಳಿಕೆ. ಮನುಷ್ಯನ ಈ ಸ್ವಭಾವವನ್ನು ಗಮನಿಸಿದ ದಾಸರು ಹೆಣ್ಣನಿಚ್ಚಿಸುವರೆ ಮೂಢ ಅದನ್ನು ಕಣ್ಣು ಮೈ ಮನಗಳಿಂ ಸೋಂಕಬೇಡ' ಎಂದು ಪದೇ – ಪದೇ ರಾವಣ ಕೀಚಕಾದಿಗಳ ಉದಾಹರಣೆ ಕೊಟ್ಟು, ಅವರಿಗಾದ ಗತಿಯನ್ನು ವಿವರಿಸಿ 'ಅವಳ ಸಣ್ಣ' ಬೈತಲೆ ಕಂಡು ಮರುಳಾಗಬೇಡ ಎಂದು ಎಚ್ಚರಿಸಿದರು.

ಹೆಣ್ಣು–ಗಂಡುಗಳು ಲೋಕದಲ್ಲಿ ಪರಸ್ಪರ ಹಿತಶತ್ರುಗಳು. ಅವರ ಆಕರ್ಷಣೆ ಸಂಬಂಧಗಳು ಹಿತಮಿತವಾಗಿದ್ದಲ್ಲಿ(ಸಮಾಜದ ಸಹಿ ಬಿದ್ದಲ್ಲಿ) ಸೃಷ್ಟಿಕ್ರಿಯೆಯಲ್ಲಿ ಸಾರ್ಥಕತೆ ಪಡೆಯುತ್ತವೆ. ಅತಿಯಾದರೆ ಅನಾಹುತಕ್ಕೆ ಎಡೆ ಮಾಡಿಕೊಡುತ್ತವೆ. ಅಷ್ಟೇ. ಸಮಾಜದಲ್ಲಿ ಅಂತಹ ಅನಾಹುತಗಳನ್ನು ಗಮನಿಸಿದ್ದ ದಾಸರು ಹೆಣ್ಣಿನ ಮೋಹ ಬೇಡವೆಂದು ಬುದ್ಧಿ ಹೇಳಿರುವರು. ಅದರಲ್ಲೂ 'ತನ್ನ ವಶಕೆ' ಬಾರದ ಪರಹೆಣ್ಣಿನ ಕೂಟ ದೆಸೆದೆಸೆಗಪಕೀರ್ತಿಯಾಟ ಎಂದು ಅನೇಕ ಕೀರ್ತನೆಯಲ್ಲಿ ಹೇಳಿದ್ದಾರೆ.

ನೋಡದಿರು ಪರಸ್ತ್ರೀಯರ
ನೋಡಿದರೆ ಕೇಡಹುದು ತಪ್ಪದಿದಕೋ
ನೋಡಿದರೆ ಸ್ತ್ರೀ ಹತ್ಯವು ನುಡಿಸಿ ಮಾ
ತಾಡಿದರೆ ಗೋಹತ್ಯವು
ಕಾಡಿದರೆ ಶಿಶುಹತ್ಯವು ಮೈ –
ಗೂಡಿದರೆ ಬ್ರಹ್ಮಹತ್ಯವು

*(ಪುರಂದರದಾಸರು)*

ಭಾರತೀಯ ಪರಂಪರೆಯಲ್ಲಿ ಸ್ತ್ರೀಹತ್ಯೆ, ಗೋಹತ್ಯೆ, ಶಿಶುಹತ್ಯೆ ಮತ್ತು ಬ್ರಹ್ಮಹತ್ಯೆ ಮಾಡುವುದು ಬಹಳ ದೊಡ್ಡ ಪಾಪದ ಪರಿಕಲ್ಪನೆಯಿದೆ. ಅದು ಇಂದಿಗೂ ಇದೆ. ಈ ಎಲ್ಲಾ ಹತ್ಯೆ ಮಾಡದೇ ಇದ್ದರೂ ಕೂಡ ಪರಸ್ತ್ರೀಯರನ್ನು ಬಯಸಿ ಅವರೊಂದಿಗೆ ಅಹಿತಕರವಾಗಿ ನಡೆದುಕೊಂಡರೆ ಮೇಲಿನ ಎಲ್ಲಾ ಪಾಪಗಳು ತಟ್ಟುತ್ತವೆಂಬ ಸಾಮಾಜಿಕ ಎಚ್ಚರ ಬಹಳ ಅದ್ಭುತವಾದದ್ದು ಇದಕ್ಕೆ ಪ್ರತಿಯಾಗಿ ಕನಕದಾಸರು.

ಮೂಗ್ಹಿಡಿದು ನೀರೊಳಗೆ ಮುಳುಗಿ ಜಪತಪ ಮಾಡಿ
ಭಾಗವತ ಶಾಸ್ತ್ರಾದಿಗಳನೆಲ್ಲ ಓದಿ
ಬಾಗಿ ಪರಸತಿಯರನು ಬಯಸಿ ಕಣ್ಣಿಡುವಂಥ
ನೀತಿ ತಪ್ಪಿದವರೆಲ್ಲ ದೇವ ಬ್ರಾಹ್ಮಣರೆ?

*(ಕನಕದಾಸರು)*

ಕನಕದಾಸರು ಅವರ ಸಮಕಾಲೀನ ಸಮಾಜದಲ್ಲಿ ಉನ್ನತ ವರ್ಗದ ಜನರು ಹೇಗೆಲ್ಲಾ ಕೆಳವರ್ಗದ ಜನರನ್ನು ಪರಸ್ತ್ರೀಯರನ್ನು ಬಯಸುತ್ತಿದ್ದರು ಮಾತ್ರವಲ್ಲದೆ ಬಳಸಿಕೊಳ್ಳುತ್ತಿದ್ದರ ಶೋಷಣೆಯ ಬಗ್ಗೆ ಧ್ವನಿ ಎತ್ತಿದ್ದಾರೆ.

ಪರನಾರಿಯರ ಸಂಗವಿಲ್ಲ ಉಕ್ಕು
ಎರೆದ ಸತಿಯ ತಕ್ಕೈಸುವರಲ್ಲಿ
ಗುರು ಹಿರಿಯರ ನಿಂದೆ ಇಲ್ಲಿ ಬಾಯ
ತೆರೆಸಿ ಸೀಸವ ಕಾಯ್ದಿ ಹೊಯ್ಯುವರಲ್ಲಿ

*(ಪುರಂದರದಾಸರು)*

ಪ್ರಾಚೀನ ಕಾಲದಿಂದಲೂ ನಮ್ಮಲ್ಲಿ ಗುರುವಿಗೆ ಪವಿತ್ರ ಸ್ಥಾನವಿದೆ. ಗುರುನಿಂದೆ ಮಾಡಿ ಮತ್ತು ಪರಸ್ತ್ರೀಯರನ್ನು ಬಯಸಿ ತನ್ನ ಸತಿಯನ್ನು ಸರಿಯಾಗಿ ನೋಡಿಕೊಳ್ಳದವರಿಗೆ ಕಾದ ಸೀಸವನ್ನು ಬಿಡುತ್ತಿದ್ದರೆಂದು ಹೇಳುತ್ತ ಅಂದಿನ ಕಾಲದ

ಶಿಕ್ಷಾ ವಿಧಾನವನ್ನು ಪುರಂದರದಾಸರು ತಿಳಿಸಿದ್ದಾರೆ. ಪ್ರಸ್ತುತದಲ್ಲಿ ಇಂತಹ ಕಠಿಣ ಶಿಕ್ಷೆಗಳು ಇಲ್ಲದಿರುವುದರಿಂದ ಇಂದು ಸಾಮೂಹಿಕ ಅತ್ಯಾಚಾರ, ಉದ್ಯೋಗದಲ್ಲಿ ಲೈಂಗಿಕ ಕಿರುಕುಳಗಳು ನಡೆಯುತ್ತಿವೆ.

*ಕಾಯವನ್ನು ನಂಬದಿರು ಮಾಯಕೆ ಮರುಳಾಗದಿರು*
ಸ್ತ್ರೀಯರನ್ನು ಕಂಡು ನೀನು ಬಯಸದಿರು ಮರಳು ಮನವೆ

*(ಕನಕದಾಸರು)*

ಇಲ್ಲಿ ಕಾಯ ಎಂದರೆ ದೇಹ. ಈ ದೇಹಕ್ಕೆ ನೀನು ಮಾರುಹೋಗಬೇಡ. ಕೇವಲ ತನು ಸೌಂದರ್ಯದ ಸೆಳೆತಕ್ಕೆ ಬಿದ್ದು ಮರುಳಾಗಬೇಡಿ ಎಂದು ಕನಕದಾಸರು ಯುವಕರಿಗೆ, ಸಂಸಾರಿಗಳಿಗೆ ಕಿವಿಮಾತು ಹೇಳಿದ್ದಾರೆ.

ಪರಸತಿಯು ಪರಧನವು ಪರನಿಂದೆ ಪರಹಿಂಸೆ
ಪರಮ ಪಾತಕದ ಕಾರಣವೆಂದು ತಿಳಿದು
ದರೆಗಧಿಕ ಪುರಂದರವಿಠ್ಠಲನ ಚರಣವನು
ನೆರೆ ಭಜಿಸಿ ಸುಖಿಯಾಗಿ ಬಾಳೆಲವೂ ಮನುಜ

*(ಪುರಂದರದಾಸ)*

ಈ ಕೀರ್ತನೆಯಲ್ಲಿ ಜೈನಧರ್ಮದ ಪ್ರಮುಖ ವಿಚಾರಗಳು ಕಂಡುಬಂದಿವೆ. ಪರಸತಿ, ಪರಧನವು, ಪರನಿಂದೆ, ಪರಹಿಂಸೆ ಇವು ಪರಮ ಪಾತಕವು ಎಂದು ಹೇಳುತ್ತ ಈ ಎಲ್ಲಾ ಪಂತಗಳಿಗೆ ಬದಲಾಗಿ ಮುಕ್ತಿ ಹೊಂದುವ ಮಾರ್ಗವಾದ ಪುರಂದರವಿಠ್ಠಲನ ಚರಣವನ ಪೂಜಿಸಿ ಸುಖಿಯಾಗು ಎಂದು ಹೇಳಿದ್ದಾರೆ.

ಇದೇ ಸಂದರ್ಭದಲ್ಲಿ ಪುರಂದರದಾಸರ ಮತ್ತೊಂದು ಕೀರ್ತನೆಯನ್ನು ಹೇಳಲೇಬೇಕು.

ಆರು ಹಿತವರು ನಿನಗೆ ಮೂರು ಮಂದಿಯೊಳಗೆ
ನಾರಿಯೋ ಧಾರುಣಿಯೋ ಬಲುಧನದ ಸಿರಿಯೋ

*(ಪುರಂದರದಾಸ)*

ಇಲ್ಲಿ ಪುರಂದರದಾಸರು ಜನರಿಗೆ ಆಯ್ಕೆಯನ್ನು ನೀಡುತ್ತಿಲ್ಲ ಬದಲಾಗಿ ಇವು ಅಪಾಯದ ವಸ್ತುಗಳು ಎಂದು ಎಚ್ಚರಿಸುತ್ತ ವ್ಯಂಗ್ಯ ನುಡಿದಿದ್ದಾರೆ.

ಕರೆಸು ಕಂಬದಿ ಎಂದು ವಾದಿಸಿದವ ಕೆಟ್ಟ
ಪರ ಹೆಣ್ಣಿಗಾಸೆಪಟ್ಟು ಕೀಚಕ ಕೆಟ್ಟ

ಬರಿದೆ ದ್ರೌಪದಿಗಾಗಿ ದುರ್ಯೋಧನ ಕೆಟ್ಟ
ಉರಿ ಹಸ್ತವ ಬೇಡಿ ಭಸ್ಮಾಸುರ ಕೆಟ್ಟ

*(ಕನಕದಾಸರು)*

ಕನಕದಾಸರು ಪುರಂದರದಾಸರ ಹಾಗೆ ಪರಸ್ತ್ರೀಯರನ್ನು ಬಯಸಿದರೆ ಪಾಪ ಸುತ್ತಿಕೊಳ್ಳುತ್ತದೆ ಎಂದು ಹೇಳುತ್ತಿಲ್ಲ. ಅದಕ್ಕೆ ಬದಲಾಗಿ ಪುರಾಣದಲ್ಲಿ ಪರಸತಿಯನ್ನು ಬಯಸಿ ಆದ ದುರಂತಗಳನ್ನು ಉದಾಹರಿಸುತ್ತಿದ್ದಾರೆ. ಮಹಾಪುರುಷರು, ಮಹಾಪೌರುಷಶಾಲಿಗಳು ಕೂಡ ಹೇಗೆ ಪರಸ್ತ್ರೀ ಬಯಸಿ ಹತರಾದರೆಂಬ ಚಿತ್ರಣದ ಮೂಲಕ ತಮ್ಮ ಕಾಲದ ಜನರಿಗೆ ಎಚ್ಚರಿಕೆ ಮುಟ್ಟಿಸಿದ್ದಾರೆ. ಕನಕದಾಸರ ಕೀರ್ತನೆಗಳು ಹೆಚ್ಚು ನೇರ ಮತ್ತು ನಿಷ್ಠೂರವಾಗಿವೆ. ಈ ವಿಚಾರ ಕುರಿತಂತೆ ಪುರಂದರದಾಸರು ಹೀಗೆ ಹೇಳಿದ್ದಾರೆ:

ಪರಧನ ಪರಸತಿ ಪರನಿಂದೆಗಳುಕುತ
ತೊರೆಯೊಳು ಮಿಂದರೆ ದುರಿತ ಪೋಗುವುದೆ
ಸರ್ವವ ತೊರೆದು ಹರಿಯ ಧ್ಯಾನ ಮಾಡಲು
ವರವ ಕೊಡುವ ನಮ್ಮ ಪುರಂದರ ವಿಠಲ

*(ಪುರಂದರದಾಸರು)*

ಪುರಂದರದಾಸರು ಈ ಕೀರ್ತನೆಯಲ್ಲಿ ಜನರಿಗೆ ನೀತಿ ಹೇಳುತ್ತಿರುವುದು ಸ್ಪಷ್ಟ. ಪರಧನ, ಪರಸತಿ, ಪರನಿಂದೆಗೆ ಅಳುಕುವುದಲ್ಲದೆ ಸರ್ವವ ತೊರೆದು ಎಂಬುದರಲ್ಲಿ ಕೇವಲ ಹಣ–ಆಸ್ತಿ ಮಾತ್ರವಲ್ಲದೆ, ಮನುಷ್ಯನ ಕಾಮ, ಕ್ರೋಧ, ಮದ, ಮತ್ಸರಗಳನ್ನು ತೊರೆದು ನಿಶ್ಚಿಂತೆಯಿಂದ ಬದುಕಿದರೆ ನಮ್ಮ ಪುರಂದರವಿಠಲ ವರವ ಕೊಡುತ್ತಾನೆಂದು ಜನರಿಗೆ ನೀತಿ ಬೋಧಿಸಿದ್ದಾರೆ.

ಪತಿವ್ರತೆಯರೆಂಬುವರು ಶತಸಹಸ್ರಕೊಬ್ಬರು
ಮಿತಿಮೀರಿ ಇಹರಯ್ಯ ಇತರ ಜನರು
ಮತಿಗೆಟ್ಟು ಮನಸೋತು ಅನ್ಯ ಪುರುಷರ ಕೂಡಿ
ಗತಿಗೆಟ್ಟು ಹೋಗುವರು ಮೂರು ತೊರೆದು

*(ಕನಕದಾಸರು)*

ಪುರಂದರದಾಸ ಮತ್ತು ಕನಕದಾಸರು ಪುರುಷರು, ಪರಸ್ತ್ರೀಯರನ್ನು ಬಯಸುವುದನ್ನು ತಮ್ಮ ಕೀರ್ತನೆಗಳಲ್ಲಿ ಖಂಡಿಸುವುದೇ ಅಲ್ಲದೆ ಹೆಣ್ಣು, ಪರಪುರುಷನನ್ನು ಮೋಹಿಸುವುದರ ಬಗೆಗೂ ಕಿಡಿಕಾರಿದ್ದಾರೆ.

ಪಟ್ಟದರಸಿಯ ಬಿಟ್ಟು ಪರಸತಿಗೆ ಬಯಸುವರು
ಕೊಟ್ಟ ಸಾಲವ ನುಂಗಿಕೊಳಲು ಎಣಿಸುವರು
ಮುಟ್ಟಿ ಭಾಷೆಯ ಕೊಟ್ಟು ಮೋಸವನೆ ಮಾಡುವರು
ಬಿಟ್ಟು ಪರದೈವವನು ಮಾರಿಗೆರಗುವರು

*(ಪುರಂದರದಾಸರು)*

ಈ ಕೀರ್ತನೆಯಲ್ಲಿ ಪುರಂದರದಾಸರು ನಾಲ್ವರನ್ನು ವಿಡಂಬಿಸಿದ್ದಾರೆ. ತನ್ನ ಸತಿಯಿದ್ದು ಪರಸತಿಗೆ ಆಸೆ ಪಡುವವನನ್ನು, ಕೊಟ್ಟ ಸಾಲವ ಮರುಪಾವತಿಸದೆ ಮೋಸ ಮಾಡುವವನನ್ನು, ಮುಟ್ಟಿ ಭಾಷೆಯ ಕೊಟ್ಟು ಮೋಸ ಮಾಡುವವನನ್ನು, ಪರದೈವಕ್ಕೆ, ಮಾರಿಗೆ ಎರಗುವವರನ್ನು ಉಗ್ರವಾಗಿ ವಿಡಂಬಿಸಿದ್ದಾರೆ. ಇದಕ್ಕೆ ಸಂವಾದಿಯಾಗಿ ಕನಕದಾಸರು ಹೇಳಿದ್ದು ಹೀಗೆ:

ಗುರುಸತಿಗೆ ಪರಸತಿಗೆ ಎರಡು ಎಣಿಪನ ಸಂಗ
ಗುರುನಿಂದೆ ಪರನಿಂದೆ ಮಾಳ್ಪನ ಸಂಗ
ಪರಹಿತಾರ್ಥದ ಧರ್ಮ ಪಡೆಯದಾತನ ಸಂಗ ಇಂಥ
ಪರಮ ಪಾಮರರ ಸಂಗ ಬಹುಭಂಗ ರಂಗ

*(ಕನಕದಾಸರು)*

ಈಗಾಗಲೇ ತಿಳಿಸಿದಂತೆ ನಮ್ಮ ಪ್ರಾಚೀನ ಸಮಾಜದಲ್ಲಿ ಗುರುವಿಗೆ ಅಪಾರ ಗೌರವ ಸ್ಥಾನವಿದೆ. ಅವರನ್ನು ನಿಂದಿಸುವುದೆ ಮಹಾಪಾಪ. ಅವರ ಸತಿಯನ್ನು ಬಯಸುವುದು ಅಕ್ಷಮ್ಯ ಅಪರಾಧ. ಹಾಗೆ ಪರರ ಹಿತ ಬಯಸದೆ ಬಡವರ ಸಂಗ ಮಾಡದೆ, ಶ್ರೀಮಂತರ, ಕೆಟ್ಟವರ ಸಂಗ ಬಯಸುವುದು ಬಹು ಭಂಗ ಎಂದು ಕನಕದಾಸರು ವಿಡಂಬಿಸಿದ್ದಾರೆ.

ಪುರಂದರದಾಸರು ಈ ಕೀರ್ತನೆಯಲ್ಲಿ ಮನುಷ್ಯ ಸ್ವಭಾವತಃ ದ್ವೇಷ, ಅಸೂಯೆ, ಆಸೆ, ಚಪಲ, ದೋಷಣೆಗಳನ್ನು ವಿಡಂಬಿಸಿದ್ದಾರೆ. ಮನುಷ್ಯ ಎಲ್ಲಾ ಚಪಲಗಳಿಂದ ವಿಮುಕ್ತನಾಗಿ ಪರಸ್ತ್ರೀಗೆ ಆಸೆ ಪಡದೆ ಪುರಂದರ ವಿಠಲನ ಧ್ಯಾನ ಮಾಡಿದರೆ ಮುಕ್ತಿ ಸಾಧ್ಯ ಎಂಬುದು ಮೇಲಿನ ಕೀರ್ತನೆಯ ತಾತ್ಪರ್ಯ. ಮತ್ತೊಂದು ರೀತಿಯಲ್ಲಿ ಇದು ಆತ್ಮವಿಮರ್ಶೆಯ ಕೀರ್ತನೆಯೆಂದೆ ಹೇಳಬಹುದು.

ಬಿನ್ನಣ ಮಾತುಗಳು ಮತ್ತೆ ಮತ್ತೆ
ಘನ ಮತ್ಸರ ಕ್ರೋಧಗಳು

ಅನ್ಯಾಯದಿಂದ ಅರ್ಥವ ಗಳಿಸುವರು
ತನ್ನ ಕಾಂತನ ಬಿಟ್ಟು ಸ್ತ್ರೀಯರು
ಅನ್ಯರಿಗೆ ಮನವೆರಗಿ ಮೋಹಿಪರು
ಬಣ್ಣಗೆಟ್ಟಿತು ವರ್ಣ ತಪ್ಪಿತು ಪ್ರ
ಸನ್ನ ಶ್ರೀ ನೆಲೆಯಾದೀಕೇಶವನೆ

*(ಕನಕದಾಸರು)*

ಈಗಾಗಲೇ ತಿಳಿಸಿರುವಂತೆ ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಗಳ ನಡುವೆ ಅನೇಕ ರೀತಿಯಲ್ಲಿ ಸಾಮ್ಯತೆ ಇದೆ. ಅದಕ್ಕೆ ಈ ಮೇಲಿನ ಕೀರ್ತನೆ ಕೂಡ ಸಾಕ್ಷಿಯಾಗಿದೆ. ಇಲ್ಲಿ ಕನಕದಾಸರು, ದ್ವೇಷ, ಕ್ರೋಧ, ಅನ್ಯಾಯ, ಆಸೆಗಳಿಂದ, ಬಿನ್ನಾಣದ ಮಾತುಗಳಿಂದ ಪರಸ್ಪರ ಹೇಗೆ ಮೋಸಗೊಳಿಸುತ್ತಾರೆ, ಹೇಗೆ ಮೋಹಿಸುತ್ತಾರೆಂಬುದನ್ನು ವಿಡಂಬಿಸಿದ್ದಾರೆ.

ಈ ಎಲ್ಲಾ ಕೀರ್ತನೆಗಳಲ್ಲಿ ಪರಸ್ತ್ರೀಯರನ್ನು ಬಯಸುವ ಅಪರಾಧ ಶಿಕ್ಷಾರ್ಹ ಎಂದು ಪುರಂದರ–ಕನಕರು ಸಾರಿ, ಶುದ್ಧ ಜನಸ್ಸಿನಿಂದ ಬಾಳುವುದಕ್ಕೆ ಜನರಿಗೆ ಕರೆಕೊಟ್ಟಿದ್ದಾರೆ.

ಪರಸತಿಯ ಬಯಸದಿದ್ದರೆ ಒಂದು ಸ್ನಾನ
ಪರರ ನಿಂದಿಸದಿರುವುದು ಒಂದು ಸ್ನಾನ
ಪರರೊಡೆಯಪಹರಿಸದಿರೆ ಒಂದು ಸ್ನಾನ
ಪರತತ್ತ್ವ ತಿಳಿದುಕೊಂಡರೆ ಗಂಗಾಸ್ನಾನ

*(ಪುರಂದರದಾಸರು)*

ಇಲ್ಲಿ ಸ್ನಾನ ಎಂಬುದು ಮುಕ್ತಿಯ ಪ್ರತಿಮಾತ್ಮಕ ಪದ ಎಂದು ಭಾವಿಸಬಹುದು. ಇಲ್ಲಿ ಪರಸತಿಯನ್ನು ಬಯಸದೇ ಇರುವುದು, ಪರರನ್ನು ನಿಂದಿಸದೇ ಇರುವುದು ಇದುವರೆಗಿನ ಕೀರ್ತನೆಗಳಲ್ಲಿ ಸಾಮಾನ್ಯವಾಗಿದೆ. ಆದರೆ ಈ ಕೀರ್ತಿನೆಯಲ್ಲಿನ ವಿಶೇಷವೆಂದರೆ ಪರರೊಡವೆಯಪಹರಿಸದಿರೆ ಎಂದಿರುವುದು ಅನೇಕಾರ್ಥವನ್ನು ಧ್ವನಿಸುತ್ತದೆ. ಹಾಗೆಯೇ ಪರತತ್ತ್ವ ಕೂಡ ವಿಶಾಲ ವ್ಯಾಪ್ತಿ ಪಡೆದುಕೊಳ್ಳುತ್ತದೆ. ಇದಕ್ಕೆ ಕನಕದಾಸರು ಈ ಪರಿಯಾಗಿ ಹೇಳುತ್ತಾರೆ.

ಪರಸತಿಯ ಭ್ರಮಿಸದಿದ್ದರೆ ಒಂದು ಸ್ನಾನ
ಪರನಿಂದೆಯ ಮಾಡದಿದ್ದರೊಂದು ಸ್ನಾನ

ಪರೋಪಕಾರ ಮಾಡುವುದೊಂದು ಸ್ನಾನ
ಪರತತ್ತ್ವವರಿತು ಕೊಂಬುದೆ ಒಂದು ಸ್ನಾನ

*(ಕನಕದಾಸರು)*

ಪುರಂದರದಾಸರು ಮತ್ತು ಕನಕದಾಸರ ನಡುವೆ ಪರಸ್ಪರ ಪ್ರಭಾವವಿದೆ ಎಂಬುದು ಮೇಲಿನ ಕೀರ್ತನೆಯಲ್ಲಿ ಗೋಚರವಾಗುತ್ತದೆ. ಕನಕದಾಸರು ಪರೋಪಕಾರ ಮಾಡುವುದು ಪರತತ್ತ್ವವರಿತು ಕೊಂಬುದೆ ಒಂದು ಸ್ನಾನ ಎಂಬ ಸಣ್ಣ ಬದಲಾವಣೆಯೊಂದಿಗೆ ಪುರಂದರದಾಸರ ಕೀರ್ತನೆಯನ್ನು ಯಥಾವತ್ ಬಳಸಿದ್ದಾರೆ.

ಸತಿಯಿದ್ದಲ್ಲಿ ಪರಸತಿಯ ಬಯಸುವನೆ ದ್ರೋಹಿ
ಹೆತ್ತವರೊಡನೆ ಕಲಹ ಮಾಡುವನೆ ದ್ರೋಹಿ
ಯತಿಗಳನು ಒಂದೆ ಸಮ ನಿಂದಿಸುವನೆ ದ್ರೋಹಿ
ಸತಿಯನ್ನು ಪರರ ವಶಗೈವವನೆ ದ್ರೋಹಿ

*(ಕನಕದಾಸರು)*

ಕನಕದಾಸರು ಇಲ್ಲಿ ಪರಸತಿಯನ್ನು ಬಯಸುವವ ಮಾತ್ರ ದ್ರೋಹಿಯಲ್ಲ, ಪರರ ವಶಗೈಯುವವನನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಕನಕದಾಸರ ಇಂತಹ ದ್ವಿಮುಖ ಮತ್ತು ವೈಚಾರಿಕ ಚಿಂತನೆಗಳು ಬಹಳ ವಿಶೇಷವೆನಿಸುತ್ತದೆ ಎಂದೂ ಸಾಧ್ಯತೆಗಳ ಬಗ್ಗೆ ಚಿಂತಿಸುವುದೂ ವಿಶೇಷವೆನಿಸುತ್ತವೆ. ಎರಡೂ ಸಾಧ್ಯತೆಗಳ ಬಗ್ಗೆ ಚಿಂತಿಸುವುದೂ ವಿಶೇಷವೇ ಸರಿ. ಅದರಲ್ಲೂ ಕನಕದಾಸರು ಹೆತ್ತವರ ಬಗ್ಗೆ ಇದುವರೆವಿಗೂ ಧ್ವನಿ ಎತ್ತಿರಲಿಲ್ಲ. ಹೀಗೆ ಕನಕದಾಸರು ಎಲ್ಲಾ ಸೂಕ್ಷ್ಮಗಳನ್ನು ವಿಡಂಬಿಸಿದ್ದಾರೆ.

ಪರಸತಿಯ ಬಯಸುವಗೆ ಪನ್ನಗ ಶಯನವೇಕೆ
ಹರಿದಾಡುವನಿಗೇಕೆ ಆಡಪಗಡಿ
ಸಿರಿದೇವಿ ಶೃಂಗಾರಗೈದು ವರಿಸಿದ ಬಳಿಕ
ಧರೆಗಧಿಕನಾದನೀ ಪುರಂದರವಿಠಲ

*(ಪುರಂದರದಾಸರು)*

ಪುರಂದರದಾಸರು ಇಲ್ಲಿ ವೃತ್ತಿ ಕಸುಬಿನ ಬಗ್ಗೆ ಮಾತನಾಡುತ್ತ ಪರಸತಿಯನ್ನು ಬಯಸುವವರನ್ನು ಬಹುವಾಗಿ ವಿಡಂಬಿಸಿದ್ದಾರೆ.

ನೆರೆಮನೆಯ ಭಾಗ್ಯ ನೋಡಿ ಸೈರಿಸ
ಲಾರದಸೂಯನಾಗಿ ಹರಿಸ್ಮರಣೆಗೆ ವಿಮುಖನಾದೆ

ನರರ ಸ್ತುತಿಯ ಮಾಡಿದೆ
ಪರರ ಸತಿಗೆ ಪರರ ಅನ್ನಕೆ
ತಿರುಗಿ ತಿರುಗಿ ಚಪಲನಾದೆ
ಗುರು ಹಿರಿಯರ ದೂಷಿಸಿ ಮರುಳಾದಿ ದೀನಶರಣ್ಯ

*(ಪುರಂದರದಾಸ)*

**ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಗಳಲ್ಲಿ ಪ್ರಭುತ್ವ ವಿಡಂಬನೆ**

ಪ್ರಭುತ್ವ ವಿಡಂಬನೆ ಎಂದಾಕ್ಷಣ ಕೇವಲ ರಾಜಪ್ರಭುತ್ವ ಎಂಬ ಸೀಮಿತ ಅರ್ಥವಲ್ಲ. ಮನುಷ್ಯನ ಸ್ವತಂತ್ರ ಹರಣ ಮಾಡುವ ಕೌಟುಂಬಿಕ ವ್ಯವಸ್ಥೆಯಿಂದ ಹಿಡಿದು ರಾಜಾಡಳಿತದವರೆಗೆ ಪ್ರಭುತ್ವದ ನೆಲೆಯನ್ನು ಗುರುತಿಸಬಹುದು. ಪುರಂದರದಾಸ ಮತ್ತು ಕನಕದಾಸರು ಸೂಕ್ಷ್ಮಾತಿಸೂಕ್ಷ್ಮವಾಗಿ ಎಲ್ಲಾ ಮಜಲುಗಳನ್ನು ವಿಡಂಬಿಸಿದ್ದಾರೆ.

'ನಾನು' ಎಂದರೆ ಯಾರು? ನಾನು ಬಂದದ್ದು ಎಲ್ಲಿಂದ? ಹೋಗುವುದೆಲ್ಲಿಗೆ? ಈ ಶರೀರವೇ ನಾನು? ಈ ಶರೀರ ನನ್ನದು ಎಂದಾದರೆ ಅದೇ ನಾನಲ್ಲವೆಂದಾಯಿತು. ಶರೀರದ ಸ್ವರೂಪವೇನು? ಇತ್ಯಾದಿ ಹಲವು ಹತ್ತು ಪ್ರಶ್ನೆಗಳು ಈ ಹಂತದಲ್ಲಿ ಹರಿದಾಸರನ್ನು ಕಾಡಿದೆ. ಈ ಶರೀರ 'ನಾನಲ್ಲ' ಎನ್ನಿಸಿದ ಕೂಡಲೇ ಮನಸ್ಸು ಅದರ ಸ್ವರೂಪ, ಗುಣ, ಸ್ವಭಾವಗಳ ಚಿಂತನೆ ನಡೆಸಿದೆ. ಹಿಗ್ಗುವ ಕುಗ್ಗುವ ಮುಗ್ಗುವ ಬೆಂಕಿಯಲ್ಲಿ ದಗ್ಧವಾಗುವ ಶರೀರವಿದು. ರೋಗರುಜಿನಗಳಿಂದ ನರಳುವ, ಒಪ್ಪತ್ತು ನೀರಿಲ್ಲದಿದ್ದರೆ ನಾರುವ, ಮುಪ್ಪಡರುತ್ತಲೇ ಒಪ್ಪಗೆಡುವ ದೇಹಕ್ಕೆ ಸಾವು ನಿಶ್ಚಿತ. ಅದರ ಬಗ್ಗೆ ವ್ಯರ್ಥ ಮೋಹ ಬೇಡ. 'ಹುಟ್ಟುತ್ತೇನು ತರಲಿಲ್ಲ ಸಾಯುತೇನು ಒಯ್ಯಲಿಲ್ಲ – ಇದು ಮನುಷ್ಯನ ನಶ್ವರ ಬಾಳಿನ ಪರಿ. ಈ ಕ್ಷಣಿಕ ತನುವಿನ ವ್ಯಾಮೋಹವನ್ನು ಭಗವಂತನತ್ತ ಹೊರಳಿಸಿ ಧ್ರುವ, ಅಜಾಮಿಳ. ಪ್ರಹ್ಲಾದರಂತಾಗಿರಿ ಎಂದು ತಮ್ಮ ಮನಸ್ಸಿಗೂ ಆ ಮೂಲಕ ಇತರರಿಗೂ ಬೋಧಿಸಿ ಮಾರ್ಗದರ್ಶನ ಮಾಡಿದ್ದಾರೆ. ಇದೇ ಪ್ರಭುತ್ವ ವಿರೋಧಿ ನಿಲುವು, ಪ್ರಭುತ್ವ ಮೀರುವ, ಅದನ್ನು ಮುರಿದು ಭಕ್ತಿ ಪ್ರಭುತ್ವ ಕಟ್ಟುವ, ಮಾನಸಿಕ ತುಡಿತಗಳು ಇವು.

ಹರಿದಾಸರು ಅಂತೆಯೇ ಪ್ರಭುತ್ವದಿಂದ ಮೆರೆದು ಮಣ್ಣು ಮುಕ್ಕಿದ ಅನೇಕ ಪುರಾಣ ಪ್ರತಿಭೆಗಳನ್ನು ತಮ್ಮ ಕೀರ್ತನೆಯಲ್ಲಿ ಮನಬಂದಂತೆ ವಿಡಂಬಿಸಿದ್ದಾರೆ ಕೆಲವು ಉದಾಹರಣೆಗಳು ಈ ಕೆಳಗಿನಂತಿವೆ. ನರಕಾಸುರ, ಹಿರಣ್ಯಕಶಿಪು, ಕೌರವ, ಕೀಚಕಾದಿಗಳಂತೆ ಆಗಬಾರದೆಂದು ಎಚ್ಚರಿಸುವರು. ಮನುಷ್ಯನ ಅಹಂಕಾರ ಪ್ರವೃತ್ತಿ-ಯನ್ನು ಗಮನಿಸಿದ ಕನಕದಾಸರು ತಮ್ಮ ಒಂದು ಕೀರ್ತನೆಯಲ್ಲಿ 'ತ್ಯಾಗದಲ್ಲಿ

ಕರ್ಣನೋ..... ಕಲಿಗಳೊಳು ದ್ರೋಣ ಭೀಷ್ಮಾಚಾರ್ಯರೋ, ನೀನು?' ಮರೆಯದಿರು ಮೆರೆಯದಿರು ಎಲೆ ಮಾನವಾ ಎಂದು ಕಳಕಳಿಯಿಂದ ಬುದ್ಧಿ ಹೇಳಿ ತಿದ್ದುವ ಪ್ರಯತ್ನ ಮಾಡಿರುವುದನ್ನು ನೋಡಬಹುದು. ವಿಜಯದಾಸರು 'ಹಿಗ್ಗದಿರು ಹಿಗ್ಗದಿರು ಮನುಜ ಪಶುವೇ- ಎಂದು ಎಚ್ಚರಿಸುತ್ತ 'ಶೂರತನದಲಿ ಭೀಷ್ಮ ಅಭಿಮನ್ಯು ನೀನೇನೋ... ಬಲದಲ್ಲಿ ಬಲರಾಮ ಶಲ್ಯ ಕೀಚಕನೇನೋ– ಎಂದು ಅವನು, ತಾನೂ ಅಲ್ಲವೆಂಬುದನ್ನು ಮನಗಾಣಿಸಲು ಯತ್ನಿಸಿದ್ದಾರೆ. ಹೀಗೆ ಜನಸಾಮಾನ್ಯರಿಗೆ ಪರಿಚಿತವಾಗಿರುವ ಪುರಾಣಪಾತ್ರ, ಕಥೆ, ಘಟನೆಗಳನ್ನು ಹರಿದಾಸರು ತಮ್ಮ ಉಪದೇಶದ ಸಶಕ್ತ ಮಾಧ್ಯಮಗಳಾಗಿ, ಅತ್ಯಂತ ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. ಭರತನಂತಹ ತಮ್ಮ, ಹನುಮನಂತಹ ಸೇವಕ, ಶ್ರೀರಾಮಚಂದ್ರ, ಧರ್ಮರಾಯರಂಥ ಒಡೆಯರು ಅಪರೂಪವಾದರೂ ಕೌರವರಂಥ ದಾಯಾದಿಗಳು, ಕಂಸನಂಥ ಸೋದರಮಾವ, ಕೀಚಕನಂಥ ಕಾಮುಕ, ರಾವಣನಂಥ ಲಂಪಟ, ಕೈಕೆಯಂಥ ಕಿಡಿಗೇಡಿ, ಶಕುನಿಯಂಥ ಕುತಂತ್ರಿಗಳು, ಸಮಾಜದಲ್ಲಿ ನಮ್ಮ ಸುತ್ತಮುತ್ತ ಇರುವಂಥವರೇ. ಅಂಥ ವ್ಯಕ್ತಿಗಳನ್ನೂ ಗುರುತಿಸಿದಾಗ ತಟ್ಟನೆ ರಾವಣನೆಂದೋ, ಕೀಚಕನೆಂದೋ ಕಂಸನೆಂದೋ ಕರೆದುಬಿಡುತ್ತೇವೆ. ಹಾಗಾಗಿ ಜನಮನದ ಈ ಪುರಾಣಪ್ರಜ್ಞೆಯ ಹಿನ್ನೆಲೆ ಹರಿದಾಸರ ಉದ್ದೇಶವನ್ನು ಸಮರ್ಥವಾಗಿ ಈಡೇರಿಸಿತು.

ಹೀಗೆ ಇಂತಹ ಅತಿರಥ ಮಹಾರಥರನ್ನೇ ಕ್ಷುಲ್ಲಕಗೊಳಿಸಿ ಹರಿಭಕ್ತರ ಪಾರಮ್ಯವನ್ನು ತಾರಕಕ್ಕೆ ಏರಿಸಿದ ಪುರಂದರದಾಸ ಮತ್ತು ಕನಕದಾಸರ ಅನೇಕ ಕೀರ್ತನೆಗಳನ್ನು ಈ ಕೆಳಗಿನಂತೆ ನೋಡಬಹುದು.

ಬಲ್ಲಿದರ ಮನೆಯ ಬಾಗಿಲ ಕಾಯ್ದು ಬೇಸತ್ತು
ಸೊಲ್ಲು ಸೊಲ್ಲಗೆ ಅವರ ಕೊಂಡಾಡುತ
ಇಲ್ಲ ಈ ವೇಳೆಯಲಿ ತಿರುಗಿ ಬಾರೆಂದನಲು
ಅಲ್ಲವನು ತಿಂದ ಇಲಿಯಂತೆ ಕೊರಗುವುದು *(ಪುರಂದರದಾಸರು)*

ಪ್ರಭುತ್ವ ವಿಡಂಬನೆಯ ಮೊದಲ ಕೀರ್ತನೆಯಲ್ಲಿ ಬಡವ ಬಲ್ಲಿದನ ಸ್ಪಷ್ಟ ಚಿತ್ರಣವಿದೆ. ಇಲ್ಲಿ ಬಡವ ತನ್ನ ಒಡೆಯನ ಹತ್ತಿರ ಸಹಾಯ ಬೇಡಿದಾಗ ಧನಿಕನು ಸಂಪತ್ತು ತನ್ನಲ್ಲಿ ಇದ್ದರು ಕೊಡದೆ ಇರುವ ಸಂದರ್ಭವು ಬಡವ "ಅಲ್ಲವನು ತಿಂದ ಇಲಿಯಂತೆ ಕೊರಗುವುದು" ಎಂಬ ಉಪಮಾಲಂಕಾರವು ಅಕ್ಷರಶಃ ಒಪ್ಪುತ್ತದೆ. ಈ ಕೀರ್ತನೆಯಿಂದ ನಾವು ಶ್ರೀಮಂತರಲ್ಲಿರುವ ನಿಷ್ಕರುಣೆಯ ಸ್ವಭಾವವನ್ನು ಅರಿಯಬಹುದು. ಇದಕ್ಕೆ ಕನಕದಾಸರು ಬೇರೆಯೇ ಚಿತ್ರಣವನ್ನೆ ಕೊಡುತ್ತಾರೆ.

ನಿಚ್ಚಣಿಗೆ ದೋಟಿಗೆ ನಿಲುಕದ ಹಣ್ಣಿನ ವೃಕ್ಷ
ನಿಚ್ಚ ನಿಚ್ಚವು ಬಾಗಿ ಫಲವಾದರೇನು
ಔಚಿತ್ಯ ವಿದ್ಯೆಯನರಿಯದ ದೊರೆ ತಾನು
ಮೆಚ್ಚಿದರೇನು ಮೆಚ್ಚದಿದ್ದರೇನು *(ಕನಕದಾಸರು)*

ಇಲ್ಲಿಯೂ ಕೂಡ ಸಕಲ ಸಂಪತ್ತು ಇದ್ದ ದೊರೆ ಬಡಬಗ್ಗರಿಗೆ ಅದನ್ನು ಹಂಚದಿದ್ದರೆ ವ್ಯರ್ಥ ಎಂದು ವಿಡಂಬಿಸುತ್ತಿದ್ದಾರೆ. ಅಷ್ಟೇ ಅಲ್ಲ ಸಂದರ್ಭೋಚಿತವಾಗಿ ದೊರೆ ವರ್ತಿಸಬೇಕು, ಹಾಗಾದರೆ ಮಾತ್ರ ಸಮಾಜ ಸುಖ-ಶಾಂತಿಯಿಂದ ಇರಲು ಸಾಧ್ಯ. ಹಾಗಾಗಿ ದೊರೆಯಾದವನಲ್ಲಿ ಸಾಮಾಜಿಕತೆ, ಶಿಕ್ಷಣ, ಮಾನವೀಯತೆ, ದಾನಮನೋಭಾವ, ಕರುಣೆ, ಅನುಕಂಪ, ಸಹನೆ, ಶೌರ್ಯ ಇವೆಲ್ಲವೂ ಮೇಳೈಸಬೇಕು ಎಂಬುದೇ ಕೀರ್ತನೆಯ ಉದ್ದೇಶ. ಇದಕ್ಕೆ ಪುರಂದರದಾಸರು ಹೀಗೆ ಹೇಳುತ್ತಾರೆ.

ವೇದವನೋದದ ವಿಪ್ರ ತಾನೇಕೆ
ಕಾದಲರಿಯದ ಕ್ಷತ್ರಿಯನೇಕೆ



*(ಪುರಂದರದಾಸರು)*

ಆ ಕಾಲಕ್ಕೆ ರಾಜನಾದವನಿಗೆ ಶಿಕ್ಷಣ ಎಷ್ಟು ಮುಖ್ಯ ಎಂಬುದು ಈ ಎರಡು ಸಾಲುಗಳಲ್ಲಿ ಅರ್ಥವಾಗುತ್ತದೆ. ಒಂದು ಕಾಲಕ್ಕೆ ವೇದಗಳು ಭಾರತದಲ್ಲಿ ಮಹಾಜ್ಞಾನ ಭಂಡಾರಗಳು ಇವುಗಳನ್ನು ಕರಗತಮಾಡಿಕೊಂಡು ರಾಜನಾದವನ್ನು ಯುದ್ಧ ಮತ್ತು ಜ್ಞಾನವನ್ನು ಕರತಲಾಮಲಕ ಮಾಡಿಕೊಂಡಿರಬೇಕಾಗಿತ್ತು.

ಮಾಳಿಗೆ ಮನೆಯೆಂದು ನೆಚ್ಚ ಕೆಡಲುಬೇಡ
ಕೇಳಯ್ಯ ಹರಿಕಥೆ ಶ್ರವಣಂಗಳ
ನಾಳೆ ಯಮದೂತರು ಬಂದೆಳೆದೊಯ್ವಾಗ
ಮಾಳಿಗೆ ಮನೆ ಸಂಗಡ ಬಾರದಯ್ಯ

*(ಪುರಂದರದಾಸರು)*

ಪುರಂದರದಾಸರ ಕೀರ್ತನೆಗಳಲ್ಲಿ ಬಹಳ ಅದ್ಭುತವಾದ ಕೀರ್ತನೆ ಇದು. ಕಾರಣ ಇಷ್ಟೆ ಮಾಳಿಗೆ ಮನೆಯೆಂದು ರಾಜನ ಅರಮನೆಯನ್ನು ಪ್ರತಿಮಾತ್ಮಕವಾಗಿ ಹೇಳುತ್ತ ಸಾಯುವಾಗ ಇದು ಅಂದರೆ ರಾಜ ಸಹಾಯಕ್ಕೆ ಬರಲಾರ ಎಂಬ ಮಾತಿನಲ್ಲಿ ಅಂದಿನ ಸಮಾಜದಲ್ಲಿ ರಾಜ ಮತ್ತು ಸಾಮಾನ್ಯರ ನಡುವೆ ಬಾಂಧವ್ಯದ ಕೊರತೆಯ

ಕಂದರವೇ ಇದ್ದಿರಬಹುದಾದ ಎಲ್ಲಾ ಸೂಕ್ಷ್ಮಾತಿಸೂಕ್ಷ್ಮಗಳನ್ನು ಪ್ರತಿಮಾತ್ಮಕವಾಗಿ ಕಟ್ಟಿಕೊಡುತ್ತಿದ್ದಾರೆ. ಇದಕ್ಕೆ ಪೂರಕವಾದ ಮತ್ತೊಂದು ಕೀರ್ತನೆಯನ್ನು ಹೇಳಲೇಬೇಕು.

ಉಂಬುಡುವುದಕ್ಕಿರುವ ಅರಸನೋಲಗಕಿಂತ
ತುಂಬಿದೂರೊಳಗೆ ತಿಂದುಂಬುವುದೆ ಲೇಸು
ಹಂಬಲಿಸಿ ಹಾಳು ಹರಟೆ ಹೊಡೆವುದಕಿಂತ
ನಂಬಿ ಹರಿದಾಸರೊಳು ಪೊಂದಿ ಹಾಡುವುದೆ ಲೇಸು

*(ಪುರಂದರದಾಸರು)*

ಪುರಂದರದಾಸರ ನಂತರ ಬಂದ ಸರ್ವಜ್ಞನಲ್ಲೂ ಇಂತಹ ಮನೋಧೋರಣೆ-ಯನ್ನು ಕಾಣುತ್ತೇವೆ. ಮೂಲ ಸೌಕರ್ಯವನ್ನೂ ಒದಗಿಸದ ಹಾಗೆ ಅವನೇ ಉಂಬುಡುವಷ್ಟು ಶಕ್ತನಿದ್ದಾಗ ಅವನಲ್ಲಿ ಹೆಚ್ಚಿನದೇನು ಇಲ್ಲದಿದ್ದಾಗ ಅಂತಹ ರಾಜನ ಬಳಿ ಇರುವುದಕಿಂತ ತುಂಬಿದ ಊರಲ್ಲಿ ಭಿಕ್ಷೆ ಬೇಡುವುದು ಸಹಜವಾಗಿಯೇ ಒಳ್ಳೆಯದು. ಅದ್ಭುತವಾದ ವಿಡಂಬನೆ, ಕನಕದಾಸರು ಮತ್ತೊಂದು ರಾಜನ ಕೊರತೆಯನ್ನು ಹಿಡಿದು ವಿಡಂಬಿಸುತ್ತಾರೆ.

ಧರ್ಮವಿಲ್ಲದ ಅರಸು ಮುರಿದ ಕಾಲಿನ ಹೊರಸು
ನಿರ್ಮಲಿಲ್ಲದ ಮನಸು ತಾ ಕೊಳಡೆ ಹೊಲಸು

*(ಕನಕದಾಸರು)*

ಈಗಾಗಲೇ ಹೇಳಿದ ಹಾಗೆ ಅರಸನಾದವನಿಗೆ ದಾನ, ಧರ್ಮ, ನಿರ್ಮಲವಾದ ಮನಸ್ಸುಗಳು ಇರಬೇಕು. ಇವುಗಳಿಲ್ಲದೆ ಅರಸ ನಿಂತ ನೀರಿಗಿಂತಲೂ ಕೊಳಕು ಎಂಬ ಭಾವವು ಮೇಲಿನ ಕೀರ್ತನೆಯಲ್ಲಿ ಇದೆ. ಶುದ್ಧವಾದ ಮನಸ್ಸು ರಾಜನಿಗೆ ಅವಶ್ಯಕ. ಇದಕ್ಕೆ ಪುರಂದರದಾಸರು ಹೀಗೆ ಹೇಳುತ್ತಾರೆ.

ಒಡನೆ ಹಂಗಿಸುವವನ ಹಾಲೋಗರಕ್ಕಿಂತ
ಕುಡಿನೀರು ಕುಡಿದುಕೊಂಡಿಹುದೆ ಲೇಸು

*(ಪುರಂದರದಾಸರು)*

ಇಡೀ ದಾಸಕೂಟವೆ ಹಂಗನ್ನು ತೊರೆದು ತಾಲ ತಂಬೂರಿ ಹಿಡಿದು ಬಾಳಿ ಬದುಕಿದವರು. ಹಾಗಾಗಿ ಇಂತಹ ಮಾತುಗಳು ಸಹಜ ಎಂದು ಭಾವಿಸಿದರೂ ಕೂಡ ಇಲ್ಲಿ ನೇರವಾಗಿ ರಾಜಪ್ರಭುತ್ವಕ್ಕೆ ವಿರೋಧವಾಗಿ ಬಂಡೆದ್ದ ಪ್ರತಿಭಟನೆಯ ನೆಲೆಗಳಿವು ಎಂದು ಹೇಳಿದರೆ ತಪ್ಪಾಗಲಾರದು.

ಸನ್ಮಾನ ಮಾಡದ ದೊರೆ ಸಾವಿರಾರು ಕೊಟ್ಟರೇನು
ತನ್ನ ತಾ ತಿಳಿಯದ ಜ್ಞಾನವೇನು
ಚೆನ್ನಾಗಿ ಪುರಂದರ ವಿಠಲನ ನೆನೆಯದವ
ಸಂನ್ಯಾಸಿಯಾದರೇನು ಸಂಸಾರಿಯಾದರೇನು?

*(ಪುರಂದರದಾಸರು)*

ಇದುವರೆವಿಗೂ ಕೇವಲ ರಾಜನನ್ನು ಮಾತ್ರ ವಿಡಂಬಿಸುವುದನ್ನು ಕಂಡರೆ ಮೇಲಿನ ಕೀರ್ತನೆಯಲ್ಲಿ ರಾಜ ಮತ್ತು ಸನ್ಯಾಸಿ ಇಬ್ಬರನ್ನೂ ತರಾಟೆಗೆ ತೆಗೆದುಕೊಂಡಿದ್ದಾರೆ. ಸನ್ಮಾನ ಎಂದರೆ ಹಣ ಅಥವಾ ವಸ್ತುವಲ್ಲ, ಪರಸ್ಪರ ಗೌರವ ಎಂಬ ತಾತ್ಪರ್ಯವಾಗಿದೆ. ರಾಜ ಸಾವಿರ ಕೊಡುವುದಕ್ಕಿಂತ ಗೌರವದಿಂದ ವರ್ತಿಸುವುದು ಅದಕ್ಕಿಂತ ದೊಡ್ಡದು. ಹಾಗೆಯೇ ಪುರಂದರ ವಿಠಲನ ನೆನೆಯದವನು ಸನ್ಯಾಸಿಯಾದರೇನು ಸಂಸಾರಿಯಾದರೇನು ಎಂಬುದರಲ್ಲಿ ಈ ಎಲ್ಲಾ ಪ್ರಭುತ್ವವನ್ನು ಮೀರಿದ ಶಕ್ತಿ ಒಂದಿದೆ ಎಂದು ಹೇಳಹೊರಟಿದ್ದಾರೆ. ಇದಕ್ಕೆ ಕನಕದಾಸರಲ್ಲಿ ಸ್ಪಷ್ಟವಾದ ವಿವರಣೆ ಈ ರೀತಿ ಇದೆ.

ಹನ್ನೊಂದಕ್ಷೋಹಿಣಿ ಬಲವುಳ್ಳ ಕೌರವನು
ರಣದೊಳಗೆ ತೊಡೆಮುರಿದು ಬಿದ್ದಿರ್ಪನಂತೆ
ವನಜಾಕ್ಷಿ ಸಿರಿಯರಸು ಬರಿಯ ಬೇಡಿದನಂತೆ
ವನಿತೆ ಧರ್ಮಜನ ತಾಯಿ ತಿಂದುಂಡಳಂತೆ

*(ಕನಕದಾಸರು)*

ಇಡೀ ಕೀರ್ತನೆ ಪ್ರಭುತ್ವದ ಮಹಾಗರ್ವ ಸೋರಿ ಹೋಗುವ ಹಾಗೂ ರಣಗೊಬ್ಬಿನಲಿ ಮೆರೆದ ದೊರೆಗೆ ಒದಗಬಹುದಾದ ದುರಂತಗಳ ಬಗ್ಗೆ ಕನಕದಾಸರು ಪುರಾಣ ಪಾತ್ರವಾದ ದುರ್ಯೋಧನನ ಉದಾಹರಣೆಯ ಮೂಲಕ ಸೊಗಸಾಗಿ ವಿವರಿಸಿದ್ದಾರೆ. ಸ್ ಸ್ ಸ್ ಹೀಗೆ ಕನಕದಾಸರ ಕೀರ್ತನೆಗಳು ಯಾವಾಗಲು ನೇರ ಮತ್ತು ವಾಚ್ಯವಲ್ಲದೆ ಕಟುನಿಷ್ಠೂರದ ನುಡಿಗಳಾಗಿವೆ.

ಆಳು ಇಲ್ಲದವನಿಗೆ ಅರಸುತನ ತಾನೇಕೆ
ಕಾಳು ಇಲ್ಲದವನಿಗೆ ಕೃಷಿ ಏತಕೆ
ತೋಳು ಇಲ್ಲದವಗೆ ಭುಜಕೀರ್ತಿ ತಾನೇಕೆ
ಲೋಲ ಪುರಂದರವಿಠಲ ಎನ್ನದವನೇಕೆ

*(ಪುರಂದರದಾಸರು)*

ಇಲ್ಲಿ ಕಟುವಿಡಂಬನೆಯೂ ಇದೆ ಹಾಗೆಯೆ ಭಕ್ತಿಯ ಪಾರಮ್ಯವೂ ಇದೆ. ಬದುಕಿನ ಕೃಷಿಯಿದೆ. ಪರಸ್ಪರ ಅವಲಂಬಿತ ವ್ಯಕ್ತಿಗಳ ಬಗ್ಗೆ ವಿಡಂಬಿಸಿದ್ದಾರೆ. ಪುರಂದರದಾಸರು ಇವುಗಳ ಜೊತೆಯಲ್ಲಿ ಭಕ್ತಿಯೇ ಮುಖ್ಯ ಎಂದು ಜನರಿಗೆ ಭಕ್ತಿಯ ಮಾರ್ಗಕ್ಕೆ ಹೆಚ್ಚು ಒಲವು ತೋರಿಸುವಂತೆ ಕರೆಕೊಟ್ಟಿದ್ದಾರೆ. ಪ್ರಭುತ್ವವನ್ನು ಅತ್ಯಂತ ನಿಕೃಷ್ಟವಾಗಿ ಕೆಳಕಂಡಂತೆ ವಿಡಂಬಿಸಿದ್ದಾರೆ.

ಆನೆ ಕುದುರೆ ಒಂಟೆ ಲೊಳಲೊಟ್ಟೆ
ಸೇನೆ ಭಂಡಾರವು ಲೊಳಲೊಟ್ಟೆ
ಮಾನಿನಿಯರ ಸಂಗ ಲೊಳಲೊಟ್ಟೆ ದೊಡ್ಡ
ಕ್ಷೋಣೀಶನೆಂಬುದು ಲೊಳಲೊಟ್ಟೆ

*(ಪುರಂದರದಾಸರು)*

ಮೇಲಿನ ಕೀರ್ತನೆಯಲ್ಲಿ ಲೊಳಲೊಟ್ಟೆ ಪದವು ವ್ಯಂಗ್ಯಾತ್ಮಕವಾದದ್ದು ಇಲ್ಲಿ ಆನೆ, ಕುದುರೆ, ಒಂಟೆ, ಬಹುಸೇನೆ, ಭಂಡಾರ, ಮಾನಿನಿಯರು, ಅಕ್ಷೋಣಿ ಸೈನ್ಯ ಇವೆಲ್ಲವು ತಾತ್ಕಾಲಿಕ ನಶ್ವರ ಜಗತ್ತು ಎಂದು ವಿಡಂಬಿಸಿದ್ದಾರೆ. ಇದಕ್ಕೆ ಒಳ್ಳೆಯ ಉದಾಹರಣೆಗಳು ಕನ್ನಡ ಸಾಹಿತ್ಯದಲ್ಲಿ ಈಗಾಗಲೇ ಇವೆ. ಉದಾಹರಣೆಗೆ ಪಂಪನ ಆದಿಪುರಾಣದ ಭರತ ಬಾಹುಬಲಿಯ ಪ್ರಸಂಗಗಳು ಈ ರೀತಿಯ ವ್ಯಂಗ್ಯವನ್ನೆ ಹೇಳುತ್ತವೆ. ಭಕ್ತಿಯೇ ದೊಡ್ಡದು ಎಂಬುದರ ಹಿಂದೆ ಹೆಣೆದಿರುವ ಕೀರ್ತನೆಗಳು ಇವು.

ಧರೆಗೆ ಧರ್ಮಜನಂತೆ ಕಂಕಭಟ್ಟನಂತೆ
ಶೂರ ಭೀಮನು ಬಾಣಸಿಗನಾದನಂತೆ
ವೀರ ಫಲ್ಗುಣನಂತೆ ಕೈಯೊಳಗೆ ಬಲೆಯಂತೆ
ಕಿರು ನಕುಲ ಸಹದೇವ ತುರುಗಾಯ್ದರಂತೆ

*(ಕನಕದಾಸರು)*

ಮೊದಲೇ ತಿಳಿಸಿದಂತೆ ಕನಕದಾಸರು ಪ್ರಭುತ್ವ ವಿಡಂಬನೆಯಲ್ಲಿ ಪುರಾಣದ ವಸ್ತುಗಳನ್ನೆ ಹೆಚ್ಚಾಗಿ ತರುತ್ತಾರೆ. ಅಲ್ಲಿಯು ಕೂಡ ಅದೇ ತರಹ ತಂದಿದ್ದಾರೆ. ಮಹಾಭಾರತದ ವಿರಾಟ ಪರ್ವದಲ್ಲಿ ಮಹಾಶೂರರು ಧೀರರೆನಿಸಿಕೊಂಡ ಧರ್ಮರಾಯ ಭೀಮ, ಅರ್ಜುನ, ನಕುಲ, ಸಹದೇವರು ವಹಿಸುವ ಕರ್ತವ್ಯಗಳನ್ನು ಕನಕದಾಸರು ವಿಡಂಬಿಸಿದ್ದಾರೆ.

ತಾನುವುಣ್ಣದ ವಸ್ತು ತನುವುದ್ದವಿದ್ದರೇನು
ದಾನವಿಲ್ಲದ ಮನೆಯು ಪಿರಿದಾದರೇನು

ಹೀನ ಗುಣದವನಿಗಧಿಕಾರ ಬಂದರೇನು
ಶ್ವಾನನಾ ಮೊಲೆಯಲ್ಲಿ ಹಾಲಿದ್ದರೇನು?

*(ಪುರಂದರದಾಸರು)*

ಪುರಂದರದಾಸರು ಈ ಕೀರ್ತನೆಯಲ್ಲಿ ಅನಾವಶ್ಯಕವಾಗಿ ಶೇಖರಣೆ ಮಾಡಿಕೊಂಡು ದಾನ ಮಾಡದವರನ್ನು ಒಳಗೊಂಡಂತೆ ಒಬ್ಬ ಕೆಟ್ಟವ್ಯಕ್ತಿಗೆ ಅಧಿಕಾರ ಸಿಕ್ಕರೆ ಸಮಾಜ ಹೇಗೆಲ್ಲ ಆಗಬಹುದೆಂಬುದನ್ನು ಶ್ವಾನನಾ ಮೊಲೆಯಲ್ಲಿ ಹಾಲಿದ್ದರೆ ಹೇಗೆ ಅದು ಉಪಯೋಗವಿಲ್ಲವೊ ಹಾಗೆ ಎಂದು ಅರ್ಥೈಸಿದ್ದಾರೆ.

ಕರೆಸು ಕಂಬದಿ ಎಂದು ವಾದಿಸಿದವ ಕೆಟ್ಟ
ಪರಹೆಣ್ಣಿಗಾಸೆಪಟ್ಟು ಕೀಚಕ ಕೆಟ್ಟ
ಬರಿದೆ ದ್ರೌಪದಿಗಾಗಿ ದುರ್ಯೋಧನ ಕೆಟ್ಟ
ಉರಿ ಹಸ್ತವ ಬೇಡಿ ಭಸ್ಮಾಸುರ ಕೆಟ್ಟ

*(ಕನಕದಾಸರು)*

ಕನಕದಾಸರ ಕೀರ್ತನೆಯಲ್ಲಿ ವಿಷ್ಣುವಿನ ಪರಾಕ್ರಮವನ್ನು ಸ್ತುತಿಸಿರುವ ಹಾಗೂ ಪರ ಹೆಣ್ಣಿಗೆ ಆಸೆಪಟ್ಟರೆ ಸಾವು ಖಚಿತ ಎಂಬುದನ್ನು ಹೆಣ್ಣಿಗೆ ಆಸೆಪಟ್ಟ ದುರ್ಯೋಧನನ ಗತಿ ಏನಾಯಿತು, ಕೀಚಕನಿಗೆ ಏನಾಯಿತು ಎಂಬುದನ್ನು ಕನಕದಾಸರು ತಮ್ಮ ಕೀರ್ತನೆಯಲ್ಲಿ ಮತ್ತೆ ಮತ್ತೆ ತರುತ್ತಾರೆ. ರಾಜನಾಗುವುದು ಮುಖ್ಯವಲ್ಲ ಉತ್ತಮ ಗುಣವನ್ನು ಮೈಗೂಡಿಸಿಕೊಳ್ಳುವುದು ಮುಖ್ಯ ಎಂಬುದು ಕನಕದಾಸರ ಖಚಿತವಾದ ಅಭಿಪ್ರಾಯ. ಇದಕ್ಕೆ ಪುರಂದರದಾಸರು ಈ ರೀತಿ ಹೇಳುತ್ತಾರೆ.

ಮೊರೆ ಹೊಕ್ಕವರ ಕಾಯದವನ ದೊರೆತನವೇನು
ಪರರಿಗುಪಕರಿಸದವ ಬಾಳಿ ಫಲವೇನು
ಭೂಪಾಲ ಸರ್ವೇಶ ರೂಪವಂತನೆನಿಸಿದೆಯೊ
ದೀಪಕೆ ಬೀಳುವ ಪತಂಗದ ಹಾಗೆ
ತಾಪಕೆ ಗುರಿಯಾದೆಯೀಪರಿಯಲ್ಲಿ

*(ಪುರಂದರದಾಸರು)*

ಪುರಂದರದಾಸರು ಹೇಳುವ ಮಾತು ಅಕ್ಷರಶಃ ಸತ್ಯ. ಸಾಮಾನ್ಯ ಜನರನ್ನು ದೊರೆಯಾದವನು ಕಾಪಾಡಬೇಕು. ರಾಜನೇ ಸಾಮಾನ್ಯರನ್ನು ಪೊರೆಯುವ ದೇವರು ಎಂದು ಹೇಳುತ್ತಲೆ ಅಧಿಕಾರ ಎಂಬುದು ಬೆಂಕಿಗೆ ಬಿದ್ದು ಕ್ಷಣಾರ್ಧದಲ್ಲಿ ಪ್ರಾಣ

ಕಳೆದುಕೊಳ್ಳುವ ಪತಂಗದ ಹಾಗೆ ಎಂದು ವಿಡಂಬಿಸಿದ್ದಾರೆ. ಇದು ಪುರಂದರದಾಸರಲ್ಲಿ ಇರುವ ದ್ವಂದ್ವವಲ್ಲ. ಇದು ವಾಸ್ತವಿಕ ಸತ್ಯ.

**ಅಧ್ಯಾಯ ೩.೪ : ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಯಲ್ಲಿ ಜಾತಿ ವಿಡಂಬನೆ**

ಭಾರತೀಯ ಸಮಾಜದಲ್ಲಿ ಜಾತಿಯ ಮೊದಲ ಲಕ್ಷಣವೆ. ಹುಟ್ಟು ಜಾತಿಯನ್ನು ನಿರ್ಧರಿಸುತ್ತದೆ ಅಂದರೆ ಒಂದು ಮಗು ಜನಿಸಿದ ತಕ್ಷಣ ಆ ಮಗುವಿಗೆ ಜಾತಿ ನಿರ್ಧಾರವಾಗುತ್ತದೆ. ಹೀಗೆ ಹುಟ್ಟಿನಿಂದ ಬರುವ ಈ ಜಾತೀಯತೆಯನ್ನು ತೊಡೆದು ಹಾಕುವುದು ಬಹಳ ಕಷ್ಟ. ಈ ಅನಿಷ್ಟ ಪದ್ಧತಿಯ ವಿರುದ್ಧ ಬುದ್ಧ, ಬಸವ, ದಾಸರು ಹೋರಾಡಿದ್ದಾರೆ. ಅಷ್ಟೇ ಅಲ್ಲ ಬ್ರಿಟಿಷರೂ ಹೋರಾಡಿದ್ದಾರೆ. ಅಷ್ಟೇ ಅಲ್ಲ ಇಂದಿಗೂ ಈ ಪದ್ಧತಿಯ ವಿರುದ್ಧದ ಹೋರಾಟ ಮುಂದುವರೆಯುತ್ತಿದೆ. ಜಾತೀಯತೆಯಿಂದ ಮಾನಸಿಕ ಕಲಹಗಳು ಮಾತ್ರವಲ್ಲದೆ ಭಾವನಾತ್ಮಕವಾಗಿ ಮನುಷ್ಯ ಸಂಬಂಧಗಳನ್ನು ದೂರ ಮಾಡಿದೆ.

ಪುರಂದರದಾಸ ಮತ್ತು ಕನಕದಾಸರ ಪ್ರಕಾರ ಜಾತಿ ಎಂಬುದು ಹುಟ್ಟಿನಿಂದ ಬರುವುದಲ್ಲ ಇದು ಮನುಷ್ಯನ ನೀಚ ವೃತ್ತಿಯಿಂದ ಬರುವಂತಹದ್ದು ಅಲ್ಲದೆ ಅವನ ಕೊಳಕು ವ್ಯಕ್ತಿತ್ವದಿಂದ ಈ ಜಾತಿಯನ್ನು ನಿರ್ಧರಿಸುತ್ತಾರೆ. ಈ ಕೆಳಕಂಡಂತೆ ನೋಡೋಣ

ಶೀಲವನು ಕೈಗೊಂಡು ನಡೆಸದಾತನೆ ಹೊಲೆಯ
ಹೇಳಿದ ಹರಿಕತೆಯ ಕೇಳದವಾ ಹೊಲೆಯ
ಆಳಾಗಿ ಅರಸಂಗೆ ಕೇಡು ಬಗೆದವ ಹೊಲೆಯ
ಸೂಳೆಯನು ಕಾಮಿಸುವ ಶುದ್ಧ ಹೊಲೆಯ

*(ಪುರಂದರದಾಸರು)*

ಇಲ್ಲಿ ಶೀಲ, ನಡತೆ, ಋಣ, ಭಕ್ತಿಯ ಹಿನ್ನೆಲೆಯಲ್ಲಿ ಮನುಷ್ಯನ ಜಾತಿಯನ್ನು ನಿರ್ಧರಿಸಲಾಗಿದೆ. ಅದರಲ್ಲೂ ಸಮಾಜದ ಅಂತ್ಯಜ ಜಾತಿಯಾದ ಹೊಲೆಯ ಎಂದು ಸಂಬೋಧಿಸಲಾಗಿದೆ.

ಮೂಗ್ಹಿಡಿದು ನೀರೊಳಗೆ ಮುಳುಗಿ ಜಪತಪ ಮಾಡಿ
ಭಾಗವತ ಶಾಸ್ತ್ರದಿಗಳನೆಲ್ಲ ಓದಿ
ಭಾಗಿ ಪರಸತಿಯರನ್ನು ಬಯಸಿ ಕಣ್ಣಿಡುವಂಥ
ನೀತಿ ತಪ್ಪಿದವರೆಲ್ಲ ದೇವ ಬ್ರಾಹ್ಮಣರೆ? *(ಕನಕದಾಸರು)*

ಇಲ್ಲಿಯೂ ಕೂಡ ಭಕ್ತಿ ಮತ್ತು ಶೀಲವನ್ನೆ ಮುಖ್ಯವಾಗಿಟ್ಟುಕೊಂಡು ಜಾತಿಯನ್ನು ಪ್ರಶ್ನಿಸಲಾಗಿದೆ. ಕನಕದಾಸರ ಪ್ರಕಾರ ಜಾತಿ ಎಂಬುದು ಮನುಷ್ಯನ ಯೋಗ್ಯತೆಗೆ ಸಂಬಂಧಿಸಿದ್ದು ಎಂಬುದು ಮೇಲಿನ ಕೀರ್ತನೆಯಿಂದ ತಿಳಿದು ಬರುತ್ತದೆ.

ನಾನು ಹೊಲೆಯನಾದರೇನು ನಿನ್ನ
ನಾಮ ಹೊಲೆಯ ವಿಠಲ
ಗುರುಗಳಲ್ಲಿ ವಿದ್ಯೆಗಳನು ಕಲಿತು
ಹಿರಿಯರ ಬಳಲಿಸುವವ ಹೊಲೆಯ
ಪರಪುರುಷಗೊಲಿದು ತನ್ನ ಪುರುಷನ
ವಿರಸವ ಮಾಡುವ ಕುಲಗೇಡಿಯೆ ಹೊಲತಿ

*(ಪುರಂದರದಾಸರು)*

ಮೊದಲೇ ಹೇಳಿದ ಹಾಗೆ ಮನುಷ್ಯನ ವ್ಯಕ್ತಿತ್ವಕ್ಕೆ ಪೂರಕವಾಗಿ ಜಾತಿ ನಿರ್ಧರಿಸಿದ ಪುರಂದರದಾಸರು ತದನಂತರ ಅವರೇ ಆತ್ಮವಿಮರ್ಶೆ ಮಾಡಿಕೊಳ್ಳುತ್ತಾರೆ. ನಾನು ಹೊಲೆಯನಾದರೆ ಎಂಬ ಮಾತಿನಲ್ಲಿ ಪುರಂದರದಾಸರು ಅನ್ಯವಾಗಿ ತಪ್ಪಿ ನಡೆದರೆ ನಿನ್ನ ನಾಮ ಹೊಲೆಯ ವಿಠಲ ಎಂದು ಆ ಭಗವಂತನಲ್ಲಿ ಪ್ರಶ್ನೆ ಕೇಳುತ್ತ ವಿಠಲನ ಮೊರೆ ಹೋಗಿದ್ದಾರೆ. ಅಲ್ಲದೆ ವಿದ್ಯೆ ಕಲಿತು ಹಿರಿಯರಿಗೆ ಗೌರವ ಕೊಡದೆ ಇರುವವನನ್ನು ಪತಿಯಿದ್ದು ಪರಪುರುಷನನ್ನು ಬಯಸುವ ಹೆಣ್ಣಿಗೆ ಹೊಲತಿ ಎಂದು ಜರಿದಿದ್ದಾರೆ. ಇವೆಲ್ಲವು ಉತ್ತಮ ಸಮಾಜ ಕಟ್ಟುವ ಪ್ರಯತ್ನಗಳೆಂದು ಹೇಳಿದರೆ ತಪ್ಪಾಗಲಾರದು.

ಕುಲಕುಲ ಕುಲವೆನ್ನುತಿಹರೊ
ಕುಲವಾವುದು ಸತ್ಯ ಸುಜನರಿಗೆ
ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರಾ

*(ಕನಕದಾಸರು)*

ಮೊದಲನೆಯ ಎರಡು ಸಾಲುಗಳು ನೀತಿ ಮಾರ್ಗದವು. ಕೊನೆಯ ಎರಡು ಸಾಲುಗಳು ಇಡೀ ಮನುಕುಲಕ್ಕೆ ಎಸೆದ ಸವಾಲು. ಇಲ್ಲಿ ಸತ್ಯವಾಗಿ ನಡೆದು ಒಳ್ಳೆಯ ವ್ಯಕ್ತಿಯಾದವನಿಗೆ ಜಾತಿಯೆಂಬುದಿಲ್ಲ. ಹಾಗೆಯೇ ಜಾತಿಯೆಂಬುದು ಸಮಾಜದಲ್ಲಿ ಹುಟ್ಟಿಕೊಂಡ ಒಂದು ಕೆಟ್ಟ ಆಚರಣೆಯೇ ಹೊರತು ಅದಕ್ಕೆ ಬಹುದೊಡ್ಡ ಮೂಲ ಯಾವುದೂ ಇಲ್ಲ ಎಂಬುದು ಕನಕದಾಸರ ಅಭಿವ್ಯಕ್ತಿ.

ಕೊಂಡ ಸಾಲುಗಳನ್ನು ತಿದ್ದದಾತನೆ ಹೊಲೆಯ
ಲಂಡತನದಲಿ ನಡೆವ ನರ ಭಂಡ ಹೊಲೆಯ
ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ
ಹೆಂಡತಿಯ ಇಚ್ಚೆಲಿರುವ ಹೇಡಿ ಹೊಲೆಯ

*(ಪುರಂದರದಾಸರು)*

ಈಗಾಗಲೇ ಹೇಳಿರುವಂತೆ ಪುರಂದರದಾಸರು ಮತ್ತೆ ಮತ್ತೆ ಜಾತಿ ಸೂಚಕವನ್ನು ಹೇಳುವುದು ಮನುಷ್ಯರ ವ್ಯಕ್ತಿತ್ವದ ಆಧಾರದ ಮೇಲೆ. ಇಲ್ಲಿ ಕೊಂಡ ಸಾಲವನ್ನು ಹಿಂತಿರುಗಿ ಕೊಡದೆ ಇರುವವನು, ಭಂಡ, ಅನ್ನದ ಋಣ ಅರಿಯದವ, ಹೆಂಡತಿಯ ಆಸೆ ಆಸೆಯರಿತು ನಡೆದು ಕೊಳ್ಳದವ ನಿಜವಾಗಿಯು ಹೊಲೆಯ ಎಂದು ಹೇಳುತ್ತ ಸಮಾಜವನ್ನು ತಿದ್ದಲು ಪ್ರಯತ್ನಿಸಿದ್ದಾರೆ. ಒಟ್ಟಾರೆ, ಜಾತಿ ಎಂಬುದು ಹುಟ್ಟಿನಿಂದ ಬರುವುದಲ್ಲ ಮನುಷ್ಯನ ಮನೋಯೋಗ್ಯತೆಯಿಂದ ಬರುವಂತಹದ್ದು.

ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ
ಕುಲವಿಲ್ಲದ ದಾಸ ಕುರುಬದಾಸ
ಛಲದಿ ನಿನ್ನ ಭಜಿಸುವವರ ಮನೆಯ ಮಾದಿಗದಾಸ
ಸಲೆ ಮುಕ್ತಿ ಪಾಲಿಸೆನ್ನೊಡೆಯ ಆದಿಕೇಶವನೆ

*(ಕನಕದಾಸರು)*

ಕನಕದಾಸರು ಸ್ವತಃ ತನಗೇ ಕುಲ ಇಲ್ಲ ಎಂದು ಮೊದಲು ಹೇಳುತ್ತ ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ ಎಂದು ಹೇಳಿದ್ದಾರೆ. ಇದರ ಅರ್ಥ ಜಾತಿಯಲ್ಲಿ ಹೊಲೆಯನೇ ಅಂತ್ಯಜನಾದರೆ ಆ ಅಂತ್ಯಜ ನಾನೆ ಎಂದು ಹೇಳುತ್ತ ಜಾತಿ ಸಮಾನತೆಯನ್ನು ಹೇಳುತ್ತ ಹದಿನಾರನೆಯ ಶತಮಾನದಲ್ಲೆ ಕನಕದಾಸರು ಸಮ ಸಮಾಜವನ್ನು ಕಟ್ಟಲು ಪ್ರಯತ್ನಿಸಿದ್ದಾರೆ.

**ಅಧ್ಯಾಯ ೩.೫ ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಯಲ್ಲಿ ದುರ್ಜನರ ವಿಡಂಬನೆ**

ಸಮಾಜದಲ್ಲಿ ಒಳ್ಳೆಯ ಜನರು ಇರುವ ಹಾಗೆಯೆ ದುರ್ಜನರೂ ಇರುತ್ತಾರೆ. ಇಂತಹ ದುರ್ಜನರನ್ನು ತಿದ್ದಿ ತೀಡಿ ಸರಿದಾರಿಗೆ ತಂದು ಸಜ್ಜನನ್ನಾಗಿ ಮಾಡಲು ಹಲವು ಪ್ರಯತ್ನಗಳು ಇವರೀರ್ವರ ಕೀರ್ತನೆಯಲ್ಲಿ ಅನೇಕ ನಿದರ್ಶನಗಳು ಇವೆ.

ಉದ್ಯೋಗ ವ್ಯವಹಾರ ನೃಪಸೇವೆ ಕುಶಲಗತಿ
ಕ್ಷುದ್ರತನ ಕಳವು ಪರದ್ರೋಹದಿಂದ

ಬುದ್ಧಿಯಿಂದಲಿ ಗಳಿಸಿ ಇಟ್ಟಿದ್ದ ಅರ್ಥವನು
ಸದ್ಯದಲಿ ಆರುಂಬುವು ಪೇಳೊ ಮನುಜ

*(ಪುರಂದರದಾಸರು)*

ಈ ಮೇಲಿನ ಕೀರ್ತನೆಯ ಪ್ರಸ್ತುತಕ್ಕೆ ಬಹಳ ಹತ್ತಿರವಾದದ್ದು ಕಾರಣ ವಾಸ್ತವ ಸಮಾಜದಲ್ಲೂ ಇವುಗಳ ಚರ್ಚೆ ಬಹಳಷ್ಟು ನಡೆಯುತ್ತಿದ್ದೆ. ಲಂಚದ ಮೂಲಕ ಸಾವಿರಾರು ಕೋಟಿ ಸಂಪಾದಿಸಿ ಸುಖಲೋಲುಪನಾಗಿ ಮೆರೆಯುವ ವ್ಯಕ್ತಿಗಳನ್ನು ಈ ರೀತಿ ಜರಿದಿದ್ದಾರೆ. ಇಂತಹ ಕೀರ್ತನೆಯಿಂದಲೆ ದಾಸರು ಸಾರ್ವಕಾಲಿಕವಾಗಿ ಬಿಡುತ್ತಾರೆ.

ನೋಡದಿರು ಪರಸತಿಯ ಕೂಡದಿರು ದುರ್ಜನರ
ಆಡದಿರು ಮಾತುಗಳ ಗರ್ವದಿಂದ
ಬೇಡದಿರು ಕೈಯ ಹಿಂದೆಗೆವ ಹೇಡಿಯ ಕೊಂ
ಡಾಡದಿರು ಬೀದಿಗೂಳುಂಬ ದೈವಗಳನು

*(ಕನಕದಾಸರು)*

ಇಡೀ ಕೀರ್ತನೆಯಲ್ಲಿ ಸಜ್ಜನರ ಸಹವಾಸಕ್ಕೆ ಕರೆ ಕೊಡುವುದರ ಮೂಲಕ ಸಮಾಜದಲ್ಲಿನ ಹೇಡಿಗಳನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಸೋಮಾರಿಗಳಿಗೆ ಬದುಕುವ ಹಕ್ಕಿಲ್ಲ ಎಂಬುದು ಈ ಕೀರ್ತನೆಯ ತಾತ್ಪರ್ಯವಾಗಿದೆ.

ಕಂಡುದನೆ ಪೇಳರು ಕಾಣದನೆ ಪೇಳುವರು
ಉಂಡುಮನೆಗೆರಡನು ಬಗೆವುತ್ತಲಿಹರು
ಕೊಂಡಾಡಿ ಬೇಡಿದರೆ ಕೊಡರೊಂದು ರೂಪ್ವಿಯನು
ದಂಡಿಸಿ ಬಡಿವರಿಗೆ ಧನವ ಕೊಡುತಿಹರು

*(ಪುರಂದರದಾಸರು)*

ಮನುಷ್ಯ ಎಷ್ಟು ನೀಚನೆಂಬುದು ಈ ಕೀರ್ತನೆಯ ಮೂಲಕ ಮನದಟ್ಟಾಗುತ್ತದೆ. ನೋಡದೆ ಕೇಳದೆ ಇರುವುದನ್ನು ಬಲ್ಲೆಯೆಂದು ಬೊಗಳುತ್ತ ಕೊಂಡಾಡಿ ಬೇಡಿದರು ಕೊಡದೆ ದಂಡಿಸಿ ಬಡಿದವರಿಗೆ ಕೊಡುವ ಹೇಡಿ ಜನರನ್ನು ಪುರಂದರದಾಸರು ವಿಡಂಬಿಸಿದ್ದಾರೆ.

ಪರಮದುಷ್ಟನಾಗಿ ಮರೆತು ಸದ್ಧರ್ಮವ
ಗುರುಹಿರಿಯರ ಸಾಧುಗಳ ನಿಂದಿಸಿ

ಬೆರೆತನ್ಯಜಾತಿಯ ಪರನಾರಿಯ ಕೂಡಿ
ಹಿರಿಯರ ಜರೆದು ತಾ ನರಕಕ್ಕೆ ಬೀಳುವ

*(ಕನಕದಾಸರು)*

ಇಲ್ಲಿ ಕನಕದಾಸರು ದುರ್ಜನನನ್ನು ವಿಡಂಬಿಸುತ್ತಿರುವುದು ಮಾತ್ರವಲ್ಲ, ಗುರುಹಿರಿಯರನ್ನು ಗೌರವಿಸದವ, ಸಾಧುಗಳನ್ನು ಗೌರವಿಸದೆ ಇರುವವನೂ ಪರನಾರಿಯ ಬಯಸುವವ ಹಿರಿಯರನ್ನು ಶಿಕ್ಷಿಸುವವನು ನರಕಕ್ಕೆ ಹೋಗುತ್ತಾನೆ ಎಂದು ಎಚ್ಚರಿಕೆ ನೀಡಿದ್ದಾರೆ. ಈ ಎಲ್ಲಾ ತಂತ್ರಗಳೂ ಕೂಡ ಶುದ್ಧ ಸಮಾಜದ ನಿರ್ಮಾಣಕ್ಕೆ ಪ್ರಯತ್ನಿಸಿದ ತಂತ್ರಗಳು.

ಊರ ಹಂದಿಗೆ ಷಡ್ರಸಾನ್ನವನಿಕ್ಕಲು
ನಾರುವ ದುರ್ಗಂಧ ಬಿಡಬಲ್ಲುದೆ
ಘೋರಸಂಪಿಗೆ ತತ್ವಜ್ಞಾನವ ಪೇಳಲು
ಕ್ರೂರ ಕರ್ಮವ ಬಿಟ್ಟು ಸುಜನನಾಗುವನೆ

*(ಪುರಂದರದಾಸರು)*

ಹೀಗೆ ಪುರಂದರದಾಸರು ಪರೋಕ್ಷವಾಗಿ ದುರ್ಜನನನ್ನು ವಿಡಂಬಿಸುತ್ತ ಸುಜನನಾಗಿ ಬಾಳಲು ಈ ರೀತಿ ಕರೆಕೊಟ್ಟಿದ್ದಾರೆ.

ಮಾತಾಪಿತೃಗಳ ಸೇವಿಪರಾಗಿ
ಪಾಪಕಾರ್ಯವ ಬಿಟ್ಟವರಾಗಿ
ಜಾತಿಯಲಿ ಮಿಗಿಲಾದವರಾಗಿ
ನೀತಿ ಮಾರ್ಗದಲಿ ಖ್ಯಾತರಾಗಿ

*(ಪುರಂದರದಾಸರು)*

ಇದಕ್ಕೆ ಪೂರಕವಾಗಿ ಕನಕದಾಸರು ಈ ರೀತಿ ಹೇಳುತ್ತಾರೆ.

ಕಾಮ ಕ್ರೋಧಗಳೆಂಬ ಗಿಡವನು ತರಿಮಿರಯ್ಯ
ಮದಮತ್ಸರವೆಂಬ ಪೊದೆಯ ಇರಿಯಿರಯ್ಯ
ಪಂಚೇಂದ್ರಿಯಗಳೆಂಬ ಮಂಚಿಕೆಯ ಹಾಕಿರಯ್ಯ
ಚಂಚಲವೆಂಬ ಹಕ್ಕಿಯ ಓಡಿಸಿದಯ್ಯ

*(ಕನಕದಾಸರು)*

ಕನಕದಾಸರು ದುರ್ಜನರು ಯಾವ ಯಾವುದನ್ನು ತಮ್ಮ ತಮ್ಮ ತನು-ಮನಗಳಿಂದ ಓಡಿಸಿದರೆ ಸಜ್ಜನರಾಗುತ್ತಾರೆ. ಒಳ್ಳೆಯ ವ್ಯಕ್ತಿಯಾಗಲು ಯಾವ ಮಾರ್ಗ

ಅನುಸರಿಸಬೇಕು ಎಂಬುದನ್ನು ಗುರುಮಾರ್ಗದಲ್ಲಿ ನಿಂತು ಸಜ್ಜನರಿಗಾಗಿ ಹಂಬಲಿ-ಸಿದ್ದಾರೆ.

**ಅಧ್ಯಾಯ ೩.೬ ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಯಲ್ಲಿ ಕೌಟುಂಬಿಕ ವಿಡಂಬನೆ**

ಸಮಾಜದಲ್ಲಿ ಕುಟುಂಬ ಎಂಬುದು ಒಂದು ಚಿಕ್ಕ ಘಟಕ. ಇದು ಉತ್ತಮವಾಗಿದ್ದರೆ ಮಾತ್ರ ಇಡೀ ಸಮಾಜ ಆರೋಗ್ಯವಾಗಿರಲು ಸಾಧ್ಯ ಎಂಬುದನ್ನು ಮನಗಂಡ ದಾಸರು ಕೆಳಹಂತದ ಕೌಟುಂಬಿಕ ಸಂಬಂಧಗಳನ್ನು ವಿಡಂಬಿಸುತ್ತ ಸರಿದಾರಿಗೆ ತಿದ್ದಲು ಪ್ರಯತ್ನಿಸಿದ್ದಾರೆ.

ಕರಿದಾಡುವ ಸತಿ ಸುಂದರಿಯಾದರೇನು
ವಾದಿಸುವ ಮಗನು ವೈನದಲ್ಲಿದ್ದರೇನು
ಕ್ರೋಧವನು ಬೆಳೆಸುವ ಸಹೋದರನು ಇದ್ದರೇನು
ಅಧಮರ ಮನೆಯಲ್ಲಿ ಮದುವ್ಯಾದರೇನು

*(ಪುರಂದರದಾಸರು)*

ಇಲ್ಲಿ ಪುರಂದರದಾಸರು ಪ್ರತಿದಿನ ಜಗಳವಾಡುವ ಸತಿ, ವಾದಿಸುವ ಮಗ ಕ್ರೋಧದಿಂದ ಹಗೆ ಸಾಧಿಸುವ ಸಹೋದರ, ನೀಚನ ಮನೆಯ ಮದುವೆಯ ಸಂಗ ಹೇಯ ಎಂದು ಹೇಳುತ್ತ ಇವುಗಳು ಇದ್ದರೂ ನಶ್ವರ ಎಂದು ವಿಡಂಬಿಸಿದ್ದಾರೆ. ಇದರಿಂದ ಕುಟುಂಬದಲ್ಲಿ ಯಾರ್‍ಯಾರು ಹೇಗೆ ಇರಬೇಕು ಎಂಬುದು ತಿಳಿದು ಬರುತ್ತದೆ.

ಅತ್ತೆಯ ಸೊಸೆ ಬೈವಳು ಪುತ್ರರು ತಮ್ಮ
ಹೆತ್ತ ತಾಯಿಯ ಬಿಡುವರು
ಉತ್ತಮ ಗರತಿಗೆ ಅಪವಾದ, ಅವಿವೇಕಿಗಳು
ಎತ್ತ ನೋಡಲು ಹೆಚ್ಚಿ ಹೆದರಿಸಿತು
ನ್ಮತ್ತತನದಲಿ ಮನೆಯ ರಚಿಸುವರು
ಭಕ್ತಿಯೆಂಬುದ ಬಯಸದಿರುವರು
ಕತ್ತಲಾಯಿತು ಕಲಿಯ ಮಹಿಮೆ

*(ಕನಕದಾಸರು)*

ಮೇಲಿನ ಕೀರ್ತನೆಯ ಸತ್ಯತೆ ಇವತ್ತಿಗೂ ಇರುವಂತಹದ್ದೆ. ಹಾಗಾಗಿಯೆ ವೃದ್ಧಾಶ್ರಮಗಳು, ಅನಾಥಾಶ್ರಮಗಳು ಉದ್ಭವವಾಗಿವೆ. ಇದನ್ನು ಕನಕದಾಸರು ಖಂಡಿಸುತ್ತ ಅತ್ತ, ಸುತ, ಅವಿವೇಕಿಗಳನ್ನು ವಿಡಂಬಿಸಿದ್ದಾರೆ.

ಹುಸಿ ದೀನವಾಯಿತು ರಸ ಕಸವಾಯಿತು
ಸೊಸೆ ಅತ್ತೆಯ ದಂಡಿಸೋದೀ ಕಾಲ
ಬಿಸಜಾಕ್ಷ ಪುರಂದರವಿಠಲನ ಮನದಲ್ಲಿ
ಸ್ತುತಿಸುವವರಿಗಲ್ಲವೇ ಕಾಲ

*(ಪುರಂದರದಾಸರು)*

ನಾವು ಇಂದು ಅತ್ತೆಯನ್ನು ನಿಂದಿಸುವ ಸೊಸೆಯರು ಇದ್ದಾರೆಂದು ಮಾತನಾಡುತ್ತಿರುವ ಸಂದರ್ಭದಲ್ಲಿ ಈ ಕೀರ್ತನೆಯನ್ನು ಓದಿದಾಗ ಆಶ್ಚರ್ಯವಾಗುತ್ತದೆ. ಈ ಪ್ರಕ್ರಿಯೆ ಅಂದಿನ ಕಾಲದಲ್ಲಿಯೇ ಇತ್ತೇ ಎಂಬ ಪ್ರಶ್ನೆ ನಮ್ಮನ್ನು ಕಾಡುವುದರ ಜೊತೆಗೆ ಇದು ತಪ್ಪು ಎಂಬ ಅರಿವು ಕೂಡ ನಮ್ಮಲ್ಲಿ ಉಂಟಾಗುತ್ತದೆ.

ಮಾವ ಅತ್ತೆಯು ನೊಂದು ಅತ್ತಿಗೆಯು ತಾ ಜರಿದು
ಹೇವವನಿಕ್ಕಿ ಚೂರ್ಣವ ಮಾಡಲು
ಆವಾಗ ನೊಡಿದರೂ ಎನಗೆ ಹಿತರಿಲ್ಲೆಂದು
ಮಾವ ಹೊರಗಾಡುವನು ಚಿಕ್ಕನುಡಿಗಳನು

*(ಕನಕದಾಸರು)*

ಇದು ಒಂದು ಕುಟುಂಬದಲ್ಲಿ ಸೊಸೆ, ಮಗಳು ಮತ್ತು ವಯೋವೃದ್ಧನಾದ ಮಾವನ ನಡುವೆ ನಡೆಯಬಹುದಾದ ಜಗಳ ಅಥವಾ ಅವರ ನಡುವೆ ಇರುವ ವೈಷಮ್ಯಗಳು.

ಸತಿಯಳ ವಶನಾಗಿ ಜನನಿ ಜನಕರಿಗೆ
ಅತಿ ನಿಷ್ಠುರ ನುಡಿವವ ಹೊಲೆಯ
ಸುತರ ಪಡೆದು ವಾರ್ಧಿಕ್ಯ ಮದವೇರಿ
ಪತಿದ್ವೇಷ ಮಾಡುವಳೆ ಹೊಲತಿ
ಜಾರೆಯೆಂದೆನಿಸುವಳ ಕುಲಗರತಿ ಎನಬಹುದೆ. ಸಂ
ಸಾರದೊಳು ಎಚ್ಚರವಿಲ್ಲದ ಮನುಜನೆ

*(ಪುರಂದರದಾಸ)*

ಈ ಹಿಂದೆ ಹೇಳಿರುವಂತೆ ಜಾತಿ ಎಂಬುದನ್ನು ಅವರವರ ವ್ಯಕ್ತಿತ್ವಕ್ಕೆ ಸಂಬಂಧಿಸಿದ್ದು ಎಂದು ಹೇಳಿದ್ದೇನೆ. ಈ ಮೇಲಿನ ಕೀರ್ತನೆಯಲ್ಲಿಯೂ ಕೂಡ ಅದೇ ರೀತಿ ಬಂದಿದೆ. ಇದುವರೆಗೂ ನಾವು ಕುಟುಂಬದ ಸದಸ್ಯರ ನಡುವಿನ ಸಂಬಂಧದ

ಬಗ್ಗೆ ಮಾತನಾಡಿದ್ದೇವೆ. ಆದರೆ ಬಹಳ ಮುಖ್ಯವಾಗಿ ಇಲ್ಲಿ ಸಂಸಾರದೊಳು ಎಚ್ಚರವಿಲ್ಲದವ ಮನುಜನೆ ಎಂಬ ಪ್ರಶ್ನೆ ಕೌಟುಂಬಿಕ ಜವಾಬ್ದಾರಿಗಳನ್ನು ನೆನಪಿಸುತ್ತದೆ.

ವಿಟ ಜನರ ಕೂಡಿ ವೇಶ್ಯಾವಾರ್ತಿಗಿಳಿಯಬೇಡ
ಸಟೆ ಹೇಳಿ ಸಂಸಾರ ಕೆಡಿಸಬೇಡ
ತುಟಿ ಮೀರ್ದ ಹಲ್ಲಂತೆ ದೂತ ಎಂದಿಗೂ ಬೇಡ
ನಿಟಿಲನೇತ್ರನು ನಾನೆನುವ ಜಂಭ ಬೇಡ *(ಕನಕದಾಸರು)*

ಇಲ್ಲಿ ಸುಂದರ ಸಂಸಾರವಾಗಲು ಕರೆ ನೀಡುವುದಲ್ಲದೆ ನಾನೇ ಒಡೆಯ ನಾನೇ ಯಜಮಾನನೆಂಬ ಅಹಂ ಬೇಡ ಎಂದು ಹೇಳುತ್ತ ಸಮ ಬಾಳು ಸಮ ಪಾಲಿನ ಬದುಕಿಗೆ ಕನಕದಾಸರು ಹಂಬಲಿಸಿದ್ದಾರೆ.

# ಅಧ್ಯಾಯ ನಾಲ್ಕು
# ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಯಲ್ಲಿನ ಸಾಮಾಜಿಕ ವಿಡಂಬನೆಯ ಪ್ರಸ್ತುತತೆ

ಪುರಂದರದಾಸ ಮತ್ತು ಕನಕದಾಸರು ತಮ್ಮ ಸಮಕಾಲೀನ ಸಮಾಜಕ್ಕೂ ಹಾಗೂ ಈಗಿನ ಸಮಾಜಕ್ಕೂ ಅನೇಕ ನೈತಿಕ ಮೌಲ್ಯಗಳಲ್ಲದೆ, ಸಾಮಾಜಿಕ ಮೌಲ್ಯಗಳನ್ನು ಸಾರಿದ್ದಾರೆ. ಅವರ ಕೀರ್ತನೆಗಳು ಇಂದಿಗೂ ಸಮಾಜದಲ್ಲಿ ಪ್ರಭಾವ ಬೀರಿವೆ. ಅಪರೋಕ್ಷಾನುಭವದ ಅನಂತರ ಭಕ್ತರಿಗೆ ಎಲ್ಲೆಲ್ಲೂ ಶ್ರೀಹರಿಯನ್ನೆ ಕಂಡ ಅನುಭವ. ಅವರು ನೋಡಿದ್ದೆಲ್ಲ ಹರಿಮೂರ್ತಿ ಮಾಡಿದ್ದೆಲ್ಲ ಹರಿಸೇವೆ, ಹಾಡಿದ್ದೆಲ್ಲ ಹರಿಕೀರ್ತನೆ. ಎಲ್ಲವನ್ನೂ ಪ್ರೀತಿಸುವ ಮನೋಭಾವದಿಂದ ಎತ್ತರೆತ್ತರಕ್ಕೆ ಏರಿದವರು ಹರಿದಾಸರು ತಮ್ಮ ಈ ಸಾಧನೆ ಮನಃಪರಿಪಾಕದಿಂದ ಗಳಿಸಿಕೊಂಡ ಸಮಚಿತ್ತ ಸಮಾಧಾನ ಸಂತೃಪ್ತಿ ನೆಮ್ಮದಿಗಳನ್ನು ಉಳಿದವರೂ ಪಡೆಯಲಿ ಎನ್ನುವ ಉದಾರ ಮನೋಭಾವದಿಂದ ತಾವು ನಂಬಿ ನಡೆದ ಮಧ್ವಮತ ತತ್ತ್ವಗಳನ್ನು, ಬದುಕಿನಲ್ಲಿ ಕಂಡುಂಡ ಜೀವನಾನುಭವಗಳನ್ನು ಜನಸಾಮಾನ್ಯರ ಬದುಕನ್ನು ತಿದ್ದಲು ಬಳಸಿದರು. ಒಳ್ಳೆಯ ಬದುಕು ಯಾವುದು? ಬದುಕಿನಲ್ಲಿ ಮೌಲ್ಯಗಳನ್ನು ಹೇಗೆ ಅಳವಡಿಸಿಕೊಳ್ಳಬೇಕು? ಯಾವುದನ್ನು ಮಾಡಬೇಕು, ಯಾವುದನ್ನು ಮಾಡಬಾರದು? ಇತ್ಯಾದಿ ನೀತಿಸಂಹಿತೆಯನ್ನು ತಮ್ಮ ಕೃತಿಗಳ ಮೂಲಕ ಸಂಗೀತದ ಹಿನ್ನೆಲೆಯಲ್ಲಿ ಸಾಮಾನ್ಯ ಜನರಿಗೆ ಬೋಧಿಸುವ ಪ್ರಯತ್ನ ದಾಸರದು. ಆ ಸತ್ಸಂಕಲ್ಪ ಸಿದ್ಧಿಗಾಗಿ ಕಾಲಿಗೆ ಗೆಜ್ಜೆಕಟ್ಟಿ ಕೈಯಲ್ಲಿ ತಂಬೂರಿ ಹಿಡಿದು ಹೆಗಲಿಗೆ ಗೋಪಾಳಬುಟ್ಟಿ ತಗುಲಿಸಿ ಹರಿಭಕ್ತಿ, ಹರಿನಾಮ ಮಹಿಮೆಗಳನ್ನು ಬಿತ್ತರಿಸುತ್ತಾ ಜನಸಾಮಾನ್ಯರಿದ್ದಲ್ಲಿಗೆ ತಾವೇ ಹೋದರು. ತಮ್ಮ ವಿಶಿಷ್ಟ ವೇಷಭೂಷಣ, ನಡೆ–ನುಡಿಗಳಿಂದ ಜನರ ಗಮನವನ್ನು ತಮ್ಮತ್ತ ಸೆಳೆದು ಅವರನ್ನು ಮೌಢ್ಯದಿಂದ ಮೇಲೆತ್ತುವ ಸತತ ಪ್ರಯತ್ನ ಮಾಡಿದರು. ಪ್ರಪಂಚದ ಎಲ್ಲ ಸಂತ ಮಹಂತರಂತೆ ಮನುಷ್ಯನ ಅಧೋಗತಿಗೆ ಕಾರಣವಾಗಿರುವ ಮೂಲಭೂತ ವಿಷಯಗಳನ್ನು ಗುರುತಿಸಿ ಹೇಳಿದರು. ಹರಿದಾಸರ ಪ್ರಕಾರ ಮನುಷ್ಯನನ್ನು ದುಃಖದ ಕೂಪಕ್ಕೆ ತಳ್ಳುವ, ಅವನಿಗೆ ಹಿಂಸೆ, ನೋವು ನಿರಾಸೆಗಳನ್ನು ಕೊಡುವ ವಸ್ತುಗಳು ಮೂರು. ಹೆಣ್ಣು, ಹೊನ್ನು ಮಣ್ಣು ಇವುಗಳ ಮೇಲಣ ಅತಿಯಾದ ಮೋಹವೇ ಮನುಷ್ಯನ ದುಃಖಕ್ಕೆ ಮೂಲವೆಂಬುದನ್ನು ಮತ್ತೆ ಮತ್ತೆ ತಮ್ಮ ಕೀರ್ತನೆಗಳ ಮೂಲಕ ಹಾಡಿ ಜನರಿಗೆ ಮನದಟ್ಟು ಮಾಡಿಕೊಡಲು ಯತ್ನಿಸಿರುವರು. ಇವುಗಳಲ್ಲಿ ಒಂದೊಂದು ಪ್ರಳಯಾಂತಕ ಶಕ್ತಿ.

ಹೆಣ್ಣು -ತಾಯಿ, ತಂಗಿ, ಮಗಳು, ಹೆಂಡತಿ –ಈ ಎಲ್ಲ ರೂಪಗಳಿಂದಲೂ ಮನುಷ್ಯನಿಗೆ 'ಹಿತಶತ್ರುವಾಗಿ ಕಾಡುತ್ತಾಳೆ ಮುಕ್ತಪಂಥದಿಂದ ಹಿಮ್ಮೆಟ್ಟಿಸುತ್ತಾಳೆ. ವಾಲಿ, ರಾವಣ, ಕೀಚಕಾದಿಗಳು ಹೇಳಹೆಸರಿಲ್ಲದಂತೆ ಆದದ್ದು ಹೆಣ್ಣಿನಿಂದಲೇ. ಆದ್ದರಿಂದ,

ಎಚ್ಚರಿಕೆ ಎಚ್ಚರಿಕೆ ಮನವೆ
ಹಣ ಹೆಣ್ಣು ಮಣ್ಣಾಸೆ ವ್ಯರ್ಥ

ಎಂದು ಮತ್ತೆ ಮತ್ತೆ ಎಚ್ಚರಿಸುತ್ತಾರೆ. ಹರಿದಾಸರು ಹೆಣ್ಣಿನ ವ್ಯಾಮೋಹಕ್ಕೆ ಬಿದ್ದ ಪುರಾಣದ ವ್ಯಕ್ತಿಗಳು, ಚಾರಿತ್ರಿಕ ವ್ಯಕ್ತಿಗಳು ಹೇಗೆ ತಮ್ಮ ಬದುಕನ್ನೇ ಬಲಿಕೊಟ್ಟರೆಂಬುದನ್ನು ಓದಿ ಕೇಳಿ ಬಲ್ಲೆವು. ಆದರೂ ನಮಗೆ ಪಕ್ಕದ ಮನೆಯವರ ಹೆಂಡತಿ ಸುಂದರಿ, ಆದಷ್ಟು ಬೇಗ ಆದಷ್ಟು ಹೆಚ್ಚು ಗಳಿಸುವ ತವಕ, ಹಂಬಲಗಳೇ ಲೋಕದ ನಡಾವಳಿಕೆ. ಮನುಷ್ಯನ ಈ ಸ್ವಭಾವವನ್ನು ಗಮನಿಸಿದ ದಾಸರು 'ಹೆಣ್ಣನಿಚ್ಛಿಸುವರೆ ಮೂಢ ಅದನ್ನು ಕಣ್ಣು ಮೈ ಮನಂಗಳಾ ಸೋಂಕಬೇಡ' ಎಂದು ಪದೇ ಪದೇ ರಾವಣ ಕೀಚಕಾದಿಗಳ ಉದಾಹರಣೆ ಕೊಟ್ಟು ಅವರಿಗಾದ ಗತಿಯನ್ನು ವಿವರಿಸಿ, ಅವಳ ಸಣ್ಣ ಬೈತಲೆ ಕಂಡು ಮರುಳಾಗಬೇಡ ಎಂದು ಎಚ್ಚರಿಸಿರುವರು.

ಹೆಣ್ಣು–ಗಂಡುಗಳು ಲೋಕದಲ್ಲಿ ಪರಸ್ಪರ ಹಿತಶತ್ರುಗಳು. ಅವರ ಆಕರ್ಷಣೆ ಸಂಬಂಧಗಳು ಹಿತ ಮಿತವಾಗಿದಲ್ಲಿ ಸೃಷ್ಟಿಕ್ರಿಯೆಯಲ್ಲಿ ಸಾರ್ಥಕತೆ ಪಡೆಯುತ್ತವೆ. ಅತಿಯಾದರೆ ಅನಾಹುತಕ್ಕೆ ಎಡೆ ಮಾಡಿಕೊಡುತ್ತವೆ ಅಷ್ಟೇ. ಸಮಾಜದಲ್ಲಿ ಅಂತಹ ಅನಾಹುತಗಳನ್ನು ಗಮನಿಸಿದ್ದ ದಾಸರು ಹೆಣ್ಣಿನ ಮೋಹ ಬೇಡವೆಂದು ಬುದ್ಧಿ ಹೇಳಿರುವರು. ಅದರಲ್ಲೂ 'ತನ್ನ ವಶಕ್ಕೆ ಬಾರದ ಪರಹೆಣ್ಣಿನ ಕೂಟ ದೆಸೆದೆಸೆಗಪಕೀರ್ತಿಯಾಟ' – ಎಂದು ವಿವೇಕ ಹೇಳಿದ್ದಾರೆ. ಇಂದು ಸಾಮೂಹಿಕ ಅತ್ಯಾಚಾರಗಳ ಹಿನ್ನೆಲೆಯಲ್ಲಿ ಹೆಚ್ಚು ಉಪಯುಕ್ತವಾದ ಸಂದೇಶವಾಗಿದೆ.

ಇನ್ನು ಹೊನ್ನು, ಹಣ, ಹಣವಿದ್ದವನು ಮಾಡಲಾಗದ ಕೆಲಸವಾದರೂ ಯಾವುದಿದೆ ಈ ಪ್ರಪಂಚದಲ್ಲಿ? ಬೆಲೆಯಾಗದ್ದನ್ನೆಲೆ ಬೆಲೆಯ ಮಾಡಿಸುವ, ಎಲ್ಲ ವಸ್ತುಗಳನಿದ್ದಲ್ಲೆ ತರಿಸುವ ಮಂಗನಾದರೂ ಅನಂಗನೆಂದೆನಿಸುವ, ಕಂಗಳಿಲ್ಲದವಂಗೆ ಮಗಳ ಕೊಡಿಸುವ ತಾಕತ್ತು ಹಣಕ್ಕಿದೆ. ರೂಪ, ಗುಣ, ವಿದ್ಯೆ ಅಷ್ಟೇ ಏಕೆ ಮಾನವೀಯತೆ ಕೂಡ ಹಣದ ಮುಂದೆ ನಿಲ್ಲಲಾರದು. ಲೋಕದ ನೀತಿಯೇ ಹಾಗೆ. ಉಳ್ಳವರ, ಉಬ್ಬಿದ ಜೇಬಿನವರ ಹಿಂದೆ ಬೀಳುವುದು. ಖಾಲಿ ಜೇಬಿನವರ ಕೈಬಿಟ್ಟು ತುಂಬಿದ ಜೇಬಿನವನ ಹಿಂದೆ ಹಾರುವ ಮನುಷ್ಯನ ಮಂಗಬುದ್ಧಿ ದಾಸರಿಗೆ ತಿಳಿದಿದೆ. ಇದು ಇಂದಿಗೂ ವಾಸ್ತವ. ಹಣದ ಶಕ್ತಿಯೇ ಅಂಥದು. ಅದನ್ನು ಸಂಗ್ರಹಿಸಿಟ್ಟು

ಬೇಕಾದಾಗ, ಬೇಕಾದಷ್ಟನ್ನು ಸುಖೋಪಭೋಗ ಸಾಧನವಾಗಿ ಪರಿವರ್ತಿಸಿಕೊಳ್ಳಬಹುದು ಹೋಗಲಿ . . . . ಹಾಗೆ ಕೂಡಿಟ್ಟ ಹಣವಾದರೂ ಶಾಶ್ವತವೆ. ವೆಚ್ಚವಾಗಿ ಹೋಗುವುದೇ ಅದರ ರೀತಿ ಹಣದ ದಾಹವೊಂದು ಬಂದುಬಿಟ್ಟರೆ ಮನುಷ್ಯನಿಗೆ ಮಿಕ್ಕೆಲ್ಲ ವ್ಯಸನಗಳೂ ಕರೆಯದೆಯೇ ತಾವಾಗಿ ಬಂದು ಸೇರಿಕೊಳ್ಳುತ್ತವೆ. ಇಂತಹ ದುರ್ಗುಣಗಳ ಗಣಿಯಾದ ಹೊನ್ನಿನ ವ್ಯಾಮೋಹ ಬೇಡವೆಂದು ದಾಸರು ಪದೇ ಪದೇ ಉಪದೇಶಿಸಿದ್ದಾರೆ. ಬದಲಾಗಿ ಹಣವ ಗಳಿಸಬೇಕೆಂಥದು ಕೊಟ್ಟರೆ ತೀರದಂತಹುದು – ಎಂದು ಹರಿಭಕ್ತಿಯನ್ನುದ್ದೇಶಿಸಿ ಕಿವಿಮಾತು ಹೇಳುತ್ತಾರೆ. ಹಣವಿಲ್ಲದವ ಹೆಣಕ್ಕಿಂತ ಕಡೆಯೆಂಬ ವಾಸ್ತವವನ್ನೂ ದಾಸರು ಬಲ್ಲರು.

ಮಣ್ಣಂತೂ ಬಿಡಿ. ಎಲ್ಲರಿಗೂ 'ನನ್ನದು' ಎನ್ನುವ ಒಂದು ಗೂಡು, ಒಂದು ಸೂರು ಬೇಕು. ಪ್ರಾಥಮಿಕ ಅವಶ್ಯಕತೆಗಳಲ್ಲಿ ಅದೂ ಒಂದು, ಅದಕ್ಕಾಗಿ ಕಸರತ್ತು. ಹರಿದಾಸರು ಮಾನವನ ಈ ಮನೋಭಾವವನ್ನು, 'ಕೊಟ್ಟು ಮಾಡಿದ ಪುಣ್ಯಫಲ ತನ್ನದೊ ಎಂದು ತಿಳಿಯ ಹೇಳಿ 'ಹೊನ್ನು ಹೆಣ್ಣು ಮಣ್ಣಾಸೆ ವ್ಯರ್ಥ ಅವು ತನ್ನನೆ ಅಣಕಿಸಿಹೋಹುವೆಚ್ಚರಿಕೆ ಎನ್ನುವರು. ಕ್ಷಣಿಕವಾದ ಬದುಕಿನಲ್ಲಿ ಇಂತಹ ವ್ಯಾಮೋಹ, ಭ್ರಮೆಗಳಿಗೆ ಎಡೆಯಿಲ್ಲವೆಂಬುದನ್ನು ಒತ್ತಿ ಹೇಳುವರು.

ಜನರ ಮಿತಿಮೀರಿದ ಆಸೆ ಅವರನ್ನು ಎಲ್ಲಿಗೆ ಕೊಂಡೊಯ್ಯುತ್ತದೆಂಬುದನ್ನು ಬಲ್ಲ ಹರಿದಾಸರು ಮನುಷ್ಯ ತನ್ನ ಹಾಸಿಗೆಯಿದ್ದಷ್ಟು ಕಾಲು ಚಾಚಬೇಕೆಂಬುದನ್ನು ಒತ್ತಿ ಹೇಳಿರುವರು. ಈ ಎಲ್ಲಾ ಮಾತುಗಳು ಪ್ರಸ್ತುತಕ್ಕೆ ಹೆಚ್ಚು ಹತ್ತಿರವಾಗುತ್ತವೆ. ಅಲ್ಲದೆ ಉಪಯುಕ್ತವಾಗುತ್ತವೆ.

ಸಾಲವನು ಕೊಂಬಾಗ ಹಾಲೋರಗರುಂಡಂತೆ
ಸಾಲಿಗನು ಬಂದು ಎಳೆದಾಗ ಕಿಬ್ಬದಿಯ ಕೀಲು ಮುರಿದಂತೆ

ಎನ್ನುವ ಸರ್ವಜ್ಞನ ಕಿವಿಮಾತು ಅನುಭವವೇದ್ಯವಾದುದು. ಬದುಕಿನ ನೆಮ್ಮದಿ ಕೆಡಿಸುವ ವಿಚಾರಗಳಲ್ಲಿ ಈ ಸಾಲದ ಶೂಲವೂ ಒಂದು. ದಾಸರು ಹೇಳುತ್ತಾರೆ; ಹೆತ್ತಸೂತಕ ಸತ್ತ ಸೂತಕಗಳು. ಹಡೆದ ಮಡಿದ ಹತ್ತು ದಿನಗಳು ಮಾತ್ರವಾದರೆ ಋಣದ ಸೂತಕ ಜನ್ಮಜನ್ಮಾಂತರವೋ ಎಂದು, ಸಾಲಶೂಲದ ಯಮಯಾತನೆಯನ್ನು ಅವರು ಜನರಿಗೆ ಹೀಗೆ ಮನದಟ್ಟು ಮಾಡಿಕೊಟ್ಟಿರುವರು. ಮಾನವನ ಈ ಪ್ರವೃತ್ತಿ ಅಂದಿಗೂ ಇಂದಿಗೂ ಒಂದೇ. ಇಂಥ ಮನೋಧರ್ಮಕ್ಕೆ ಕಡಿವಾಣ ಹಾಕಲು ದಾಸರ ಕೀರ್ತನೆಗಳು ಸ್ವಲ್ಪ ಮಟ್ಟಿಗಾದರೂ ಸಹಾಯಕವಾಗುತ್ತವೆ.

ಮನುಷ್ಯ ತಾನು ಅತ್ಯಂತ ಪ್ರೀತಿಸುವ, ಸರ್ವಸ್ವವೆಂದು ಭಾವಿಸಿರುವ ಈ ಭೌತಿಕ ಶರೀರ ಕ್ಷಣಿಕವಾದದ್ದು. ಅದನ್ನು ಅಲಂಕರಿಸುತ್ತ, ಕನ್ನಡಿಯಲ್ಲಿ ನೋಡಿ ಹಿಗ್ಗುತ್ತ ಕೇವಲ ವಿಷಯ ಸುಖಗಳಲ್ಲೇ ಮುಳುಗಿ ಕಾಲವನ್ನು ವ್ಯರ್ಥ ಮಾಡಬೇಡ. ಪ್ರತಿಕ್ಷಣದಲ್ಲೂ ಆಯಸ್ಸು ಕ್ಷೀಣಿಸುತ್ತಾ ಹೋಗುತ್ತದೆ. ಕಾಲನ ಕರೆ ಬಂದ ಕೂಡಲೇ ಬಿಟ್ಟದ್ದು ಬಿಟ್ಟು ಹೊರಟುಬಿಡಬೇಕು. ಹಾಗೆ ಹೊರಟು ನಿಂತಾಗ 'ಪುತ್ರ ಹುಟ್ಟಿದ ದಿವಸ ಹಾಲು ಊಟದ ಹಬ್ಬ ಮತ್ತೊಬ್ಬ ಮಗನ ಉಪನಯನ ನಾಳೆ' ಅತಿಶಯವಾಗಿದೆ. ಬದುಕು ಸಾಯಲಾರೆನೊ ಎನಲು ಮೃತ್ಯು ಹೆಡತಲೆಯಲ್ಲಿ ನಗುತಿರ್ಪುದು ಎನ್ನುವ ವಾಸ್ತವ ಕಟುಸತ್ಯವನ್ನು ನಿಶ್ಚಿತ ಮೃತ್ಯು ಆಕಸ್ಮಿಕವಾಗಿ ಬಂದೆರಗುವ ಭೀಕರತೆಯನ್ನು ಜನರಿಗೆ ಹೇಳಿ ಎಚ್ಚರಿಸುತ್ತಾರೆ. ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ ಅಗ್ನಿಯೊಳಗೆ ದಹನವಾಗುವ, ದೇಹವಿದು. ನೀರಿಲ್ಲದಿದ್ದರೆ ನಾರುತ್ತೆ ರೋಗ ಬಂದರೆ ಸೊರಗುತ್ತೆ ಜನ್ಮಜನ್ಮಾಂತರಗಳಲ್ಲಿ ತೊಳಲಿ ಬಳಲಿ ಬೇಸತ್ತು ಬರುವ ಈ ಶರೀರದ ಬಗ್ಗೆ ಅತಿಯಾದ ವ್ಯಾಮೋಹ ಬೇಡ' ಎಂದಾದರೊಂದು ದಿನ ಸಾವು ತಪ್ಪಿದ್ದಲ್ಲ. ಬಿಟ್ಟು ಹೋಗುವಾಗ ಗೇಣು ಬಟ್ಟೆ ಕಾಣದು ಎಂದು ವಾಸ್ತವದತ್ತ ಬೆಟ್ಟು ಮಾಡಿ ಜನರ ಕಣ್ತೆರೆಸುತ್ತಾರೆ. ಹೌದು, ಮನುಷ್ಯನ ಹುಟ್ಟು ಆಕಸ್ಮಿಕವಾದರೂ ತಾಯ ಗರ್ಭದಲ್ಲಿ ಮೊಳೆತ ಪಿಂಡ ಒಂಬತ್ತು ತಿಂಗಳು ಒಂಬತ್ತು ದಿನ ಕಳೆದ ಕೂಡಲೇ ಭೂಮಿಗೆ ಬರಲೇಬೇಕು. ಬರುತ್ತದೆ. ಇಲ್ಲವಾದಲ್ಲಿ ಬರಿಸುತ್ತಾರೆ. ಆದರೆ ಹುಟ್ಟುತ್ತಲೆ ನಿಶ್ಚಿತವಾದ ಸಾವು ಯಾರಿಗೆ ಎಲ್ಲಿ ಯಾವಾಗ ಹೇಗೆ ಬರುತ್ತದೆಂಬ ಅರಿವು ಯಾರಿಗೂ ಇರುವುದಿಲ್ಲ. ಕಾಲಮಾತ್ರ ಮನುಷ್ಯನ ಮೇಲೆ ತನ್ನ ಛಾಪನ್ನು ಒತ್ತುತ್ತಲೇ ಹೋಗುತ್ತದೆ. 'ಹುಟ್ಟುತೇನು ತರಲಿಲ್ಲ, ಸಾಯುತೇನು ಒಯ್ಯಲಿಲ್ಲ ಇದು ನಾವು ಕಣ್ಣಾರ ಕಾಣುತ್ತಿರುವ ಮನುಷ್ಯನ ಬಾಳು. ಇಷ್ಟೆಲ್ಲ ತಿಳಿದಿದ್ದರೂ ಈ ದೇಹದ ವ್ಯಾಮೋಹ ನಮ್ಮನ್ನು ಬಿಡುವುದಿಲ್ಲ. ಆದ್ದರಿಂದ ನಮ್ಮ ಮನಸ್ಸನ್ನು ಬಲವಂತವಾಗಿ ಬುದ್ಧಿಪೂರ್ವಕವಾಗಿ ಶ್ರೀಹರಿಯ ಚರಣಕಮಲಗಳತ್ತ ತಿರುಗಿಸಿ, ಚರಣಭಜನೆ ಮಾಡುವ ಮೂಲಕ ನೆಮ್ಮದಿ ತಂದುಕೊಳ್ಳಬಹುದೆಂಬುದು ಹರಿದಾಸರು ನಮಗೆ ತೋರಿರುವ ರಾಜಮಾರ್ಗ.

ಹರಿದಾಸ ಸಾಹಿತ್ಯ ಜೀವನ ಮೌಲ್ಯಗಳನ್ನು ಎತ್ತಿಹಿಡಿದಿರುವುದು ಇನ್ನೊಂದು ಅಂಶ. ಮೌಲ್ಯಗಳ ದೃಢೀಕರಣಕ್ಕೆ ಕಳಕಳಿಯಿಂದ ಪ್ರಯತ್ನಿಸಿದ್ದಾರೆ. ಹರಿದಾಸರು ಯಾವುದೇ ಒಂದು ಸಮಾಜದಲ್ಲಿ ಲಿಖಿತ ನಿಯಮಗಳು 'ಕಾನೂನು' ಎನಿಸಿಕೊಂಡರೆ 'ಅಲಿಖಿತ ನಿಯಮಗಳು' ಮೌಲ್ಯಗಳೆನ್ನಿಸಿಕೊಳ್ಳುತ್ತವೆ. ಇಂತಹ ವಿಧಿ ನಿಷೇಧಗಳಿಂದ ವ್ಯಕ್ತಿಗತ ಬದುಕಿನಲ್ಲಿ ಆ ಮೂಲಕ ಸಮಾಜದಲ್ಲಿ ಶಿಸ್ತು ಸಂಯಮಗಳುಂಟಾಗಿ ಒಟ್ಟಾರೆ

ಬದುಕು ಹಸನಾಗುತ್ತದೆಂಬುದು ನಿರೀಕ್ಷೆ. ಜನಸಾಮಾನ್ಯರ ಬದುಕು ಉತ್ತಮವಾಗಬೇಕೆನ್ನುವ ಸದಾಶಯದಿಂದ ದಾಸರು ಪ್ರೀತಿ, ಸತ್ಯ, ದಯೆ, ದಾನ, ಧರ್ಮಗಳಂತಹ ಮೌಲ್ಯಗಲನ್ನು ಎತ್ತಿಹಿಡಿದು, ನಿಂತ ನೀರಾಗಿದ್ದ ಅನೇಕ ಮೌಲ್ಯಗಳಿಗೆ ಹೊಸ ಅರ್ಥಕೊಟ್ಟು ಅವುಗಳಗನ್ನು ದೃಢೀಕರಿಸಿದ್ದಾರೆ. 'ಸತ್ಯಂವದ', 'ಧರ್ಮಂಚರ' ಎಂಬಿತ್ಯಾದಿ ಆರ್ಷೇಯ ಮೌಲ್ಯಗಳೇ ಇಂದಿಗೂ ನಮ್ಮ ಸಮಾಜದಲ್ಲಿ ಮೌಲ್ಯಗಳಾಗಿ ಉಳಿದಿವೆ. ಕಾಲ ಸರಿದಂತೆ ಅವುಗಳ ಆಚರಣೆ ಅರ್ಥ ಕಳೆದುಕೊಂಡು ಮೌಲ್ಯಗಳು ನಿಂತ ನೀರಾದವು. ಜನರ ಮೌಢ್ಯವನ್ನು ಕಂಡು ಕಡುನೊಂದ ಪುರಂದರದಾಸರು ಮತ್ತು ಕನಕದಾಸರು ಅರ್ಥವನ್ನರಿತು ಮಾಡುವ ಆಚರಣೆಗಳಿಗೆ ಆಗ್ರಹಿಸಿದರು. ಸತ್ಯವೆಂಬುದೆ, ಸ್ನಾನ, ಉಪವಾಸ ಜಪನೇಮ ಅಸತ್ಯದಲ್ಲಿ ಮಾಡುವ ಕರ್ಮ ವ್ಯರ್ಥ ಎಂದು ತಿಳಿಯ ಹೇಳಿದರು. ಸ್ನಾನವೆಂದರೆ ನೀರು ಕಂಡಲ್ಲಿ ಮೂಗು ಹಿಡಿದು ಗುಂಡುಮುಳುಗನ ಹಕ್ಕಿಯಂತೆ ಮುಳುಗಿ ಏಳುವುದಲ್ಲ, ಬಾಯಿಗೆ ಬಂದ ಹಾಗೆ ಸುಳ್ಳು ತಟವಟಗಳನ್ನು ಹೇಳಿಕೊಂಡು ತಿರುಗುವುದಲ್ಲ. ಸತ್ಯ ನಿಷ್ಠೆಯೇ ನಿಜದ ಸ್ನಾನ, ಜಪ, ತಪ ಎಲ್ಲ ಆ ನಿಷ್ಠೆಯಿಂದ ಮುಳುಗಿದ್ದರೆ ಮನಸ್ಸಿನೊಂದಿಗೆ ಶರೀರವೂ ಮಡಿಯಾಗುತ್ತದೆ, ಶುದ್ಧವಾಗುತ್ತದೆ. ಅಂತೆಯೇ ಬಟ್ಟೆಯ ನೀರೊಳಗದ್ದಿ ಒಣಗಿಸಿ ಉಟ್ಟರೆ ಅದು ಮಡಿಯಲ್ಲ, ಹೊಟ್ಟೆಯೊಳಗಣ ಕಾಮಕ್ರೋಧವ ಬಿಟ್ಟರದು ಮಡಿಯೋ ಎಂದರು. ಕೇವಲ ಅರ್ಥವರಿಯದೆ ಆಚರಣೆಗೇ ತೋರಿಕೆಗೇ ಬೆಲೆಕೊಡುವ ಡಾಂಭಿಕರನ್ನು ನೋಡಿ ನಗೆಯು ಬರುತಿದೆ. ಎನಗೆ ನಗೆಯು ಬರುತಿದೆ । ಜಗದೊಳಿರುವ ಮನಜವರೆಲ್ಲ ಹಗರಣ ಮಾಡುವುದ ಕಂಡು' ಎಂದು ವಿಡಂಬನೆಯ ನಗೆ ನಕ್ಕಿದ್ದಾರೆ. ಪುರಂದರದಾಸರು ಧರ್ಮವನ್ನು ತೊಳೆದರೆ ಕರ್ಮವು ಹೋಗುವುದಿಲ್ಲ ನಿಜ. ಅಂತಹ ತೋರಿಕೆಯ ಮಂದಿ ಇಂದು ಇನ್ನೂ ಹೆಚ್ಚಾಗಿದ್ದಾರೆ. ದ್ವಾದಶನಾಮ ಮುದ್ರೆಗಳನ್ನು ಢಾಳಾಗಿ ಬಳಿದುಕೊಂಡು ಪೂಜೆ ಮಂತ್ರ ಗಂಟೆ, ಜಾಗಟೆಗಳಿಂದ ಜನರ ಗಮನ ಸೆಳೆದು ಪ್ರತಿದಿನ ಧರ್ಮ ದೇವರು ಎಂದು ಪ್ರವಚನ ನೀಡುವ ಮಹಾನುಭವರು ಅನೇಕರಿದ್ದಾರೆ. 'ಮಾಡೋದು ಅನಾಚಾರ ಮನೇ ಮುಂದೆ ವೃಂದಾವನ' ಅನ್ನೋ ಹಾಗೆ ಬಹುಶಃ ಇಂಥವರನ್ನು ನೋಡಿಯೆ ದಾಸರು ಹೀಗೆ ಹೇಳಿರುವುದು.

ಕನಕದಾಸರ 'ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ. ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೆ . . . . ಎನ್ನುವ

ಮಗನಿಂದ ಗತಿಯುಂಟೆ ಜಗದೊಳಗೆ
ನಿಗಮಾರ್ಥ ಸಾರ ವಿಚಾರದಿಂದಲ್ಲದೆ
ಲಲನೆಯರು ಪುರುಷರು ತಮ್ಮ ತಮ್ಮ ಕಾಮದ
ಸಲುವಾಗಿ ಕೂಡಲು ಶುಕ್ಲ – ಶೋಣಿತದಿ
ಮಿಳಿತ ಮಾನಿಸಪಿಂಡ ಪೂರ್ವಕರ್ಮದಿಂದ
ನೆಲಕೆ ಬೀಳಲು ಅದು ಸಲಹಿ ರಕ್ಷಿಪುದೆ.
ಸತ್ಯನೊಬ್ಬ ಮಗ ಶಾಂತನೊಬ್ಬ ದುರ್
ವೃತ್ತಿ ನಿಗ್ರಹನೊಬ್ಬ ಸಮಚಿತ್ತನೊಬ್ಬ
ಉತ್ತಮ ನಾಲ್ವರು ಮಕ್ಕಳಿದ್ದ ಮೇಲೆ
ಹೆತ್ತರೆ ಫಲವೇನು ಹೆರದಿದ್ದರೇನಯ್ಯ?
ಸುತರಿಲ್ಲದವರಿಗೆ ಗತಿಯಿಲ್ಲವೆಂಬುದು.
ಕೃತಕಶಾಸ್ತ್ರ ಲೌಕಿಕ ಭಾವಕೆ . . . . . .

ಎಂದು ತಿದ್ದುವ, ಕಟುವಾಗಿ ಟೀಕಿಸುವ ಕೆಚ್ಚು ನಮಗೆ ದಾರಿದೀಪವಾಗಬೇಕು. ಮೌಲ್ಯಗಳ ತೆರೆಮರೆಯಲ್ಲಿ ನಡೆಯುತ್ತಿದ್ದ ಡಂಭಾಚಾರ ಅನಾಚಾರಗಳನ್ನು ಖಂಡಿಸಿ, ಪ್ರಶ್ನಿಸಿದಂತೆಯೇ ಸಮಾಜದಲ್ಲಿ ನೆಲೆಗೊಂಡಿದ್ದು ಅರ್ಥ ಕಳೆದುಕೊಳ್ಳುತ್ತಿದ್ದ ಪಾರಂಪರಿಕ ಮೌಲ್ಯಗಳಿಗೆ ಹೊಸ ಅರ್ಥವನ್ನು ಕೊಟ್ಟು ಆಚಾರಗಳನ್ನು ವಿಚಾರಗಳ ಹಿನ್ನೆಲೆಯಲ್ಲಿ ಸ್ಥಿರೀಕರಿಸುವ ಕೆಲಸವನ್ನು ಹರಿದಾಸರು ಬಹಳ ಸಮರ್ಪಕವಾಗಿ ಮಾಡಿದ್ದಾರೆ. ಈ ಮಾತು ಇಂದಿನ ಬದಲಾಗುತ್ತಿರುವ ಮೌಲ್ಯಗಳನ್ನು ಕಾಲಕ್ಕೆ ತಕ್ಕಂತೆ, ಕಾಲಧರ್ಮಾನುಗುಣವಾಗಿ ಅರ್ಥೈಸಿ ಬಳಸಿಕೊಳ್ಳುವ ಅಗತ್ಯವನ್ನು ಸಾರಿ ಹೇಳುತ್ತಿದೆ.

ಪುರಂದರದಾಸರು ಮತ್ತು ಕನಕದಾಸರು ಜನಸಾಮಾನ್ಯರ ಭಾವನೆಗಳನ್ನು ಸ್ವಭಾವಗಳನ್ನು ಸಂಬಂಧ ಅನುಬಂಧಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಅನಾವರಣಗೊಳಿಸುವುದರಿಂದ ಅವುಗಳೊಂದಿಗೆ ಹೃದಯ ಸಂವಾದ ಸಾಧ್ಯ. ಓದುಗರಲ್ಲಿ ಹಾಡುವವರಲ್ಲಿ ಮತ್ತು ಕೇಳುವವರಲ್ಲಿ ಸಮಾನ ಭಾವ ತರಂಗಗಳೇಳುತ್ತವೆ. 'ಕಾಯಲಾರೆನೊ ಕೃಷ್ಣ ಕಂಡವರ ಬಾಗಿಲನು, ನಾಯಿಕುನ್ನಿಯಂತೆ ಪರರ ಸೇವಿಸುತ . . . ಎಂದೋ ಕೊಟ್ಟ ಬಿಡಾರದಲಿ ಇನ್ನೆಷ್ಟು ಜೀವಿಸಲಿ ಕಷ್ಟಪಡಲಾರೆ. ಹರಿಯೋ ಎಂದೋ ಹಾಡಿದಾಗ ಆ ಆರ್ತ ಮನಸ್ಸಿನೊಂದಿಗೆ ನಾವೂ ದ್ರವಿಸಿ ದನಿಗೂಡಿಸುತ್ತೇವೆ.

ಆಚಾರವಿಲ್ಲದ ನಾಲಿಗೆ ನಿನ್ನ
ನೀಚಬುದ್ಧಿಯ ಬಿಡು ನಾಲಿಗೆ
ವಿಚಾರವಿಲ್ಲದೆ ಪರರ ದೂಷಿಸುವುದಕ್ಕೆ

ಚಾಚಿಕೊಂಡಿರುವಂಥ ನಾಲಿಗೆ
ಹೆತ್ತ ತಾಯಿತಂದೆಗಳ ಚಿತ್ತವನೋಯಿಸಿ
ನಿತ್ಯದಾನವ ಮಾಡಿ ಫಲವೇನು.

ಇಂತಹ ಕೀರ್ತನೆಗಳನ್ನು ಮತ್ತೆ – ಮತ್ತೆ ಕೇಳಿದಾಗ ನಮ್ಮೊಳಗನ್ನು ನಾವೇ ವಿಮರ್ಶಿಸಿಕೊಳ್ಳುವಂತಾಗುತ್ತದೆ. ಬುದ್ಧಿ, ಮನಸ್ಸುಗಳನ್ನು ಸರಿದಾರಿಗೆ ತರುವ ಪ್ರಯತ್ನದಲ್ಲಿ ತೊಡಗುತ್ತೇವೆ.

ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ"

ಎನ್ನುವಂತಹ ಕೀರ್ತನೆ ತಪ್ತ ಮನಸ್ಸಿಗೆ ತಾಯ ಮಡಿಲಿನ ಆಸರೆಯನ್ನೊದಗಿಸ-ಬಲ್ಲದು; ಪ್ರೀತಿಯ ಸಾಂತ್ವನ ನೀಡಬಲ್ಲದು. ಇಂತಹ ನೂರಾರು ಕೀರ್ತನೆಗಳು ದಾಸಸಾಹಿತ್ಯದಲ್ಲಿವೆ. ನಾವು ಕಣ್ತರೆದು, ನೋಡಬೇಕು, ಬಾಯ್ತೆರೆದು ಹಾಡಬೇಕು, ಕಿವಿತೆರೆದು ಕೇಳಬೇಕು ಅಷ್ಟೇ.

'ಮನಃಶುದ್ಧಿಯನ್ನು ಕುರಿತು ಪುರಂದರದಾಸರು,
ದಿನದಿನ್ನ ಮಾಡುವ ಪಾಪಪುಣ್ಯದ ವೆಚ್ಚ'

ಎನ್ನುವ ಕೀರ್ತನೆಯಲ್ಲಿ ಬಹಳ ಸೊಗಸಾಗಿ ಹೇಳಿ ದಾರಿ ತೋರಿದ್ದಾರೆ. 'ತನುವ ಖಂಡಿಸಿ' 'ಮನವ ದಂಡಿಸಿ' ಪರಮಾತ್ಮನನ್ನು ಕಾಣಬೇಕಂತೆ ಮೂಲಭೂತವಾಗಿ ಮನಸ್ಸಿನ ಮೇಲೆ ಹತೋಟಿಯುಳ್ಳವನಿಗೆ ವಚನ ಶುದ್ಧಿ ಕಾಯಶುದ್ಧಿಗಳು ತಾವಾಗಿಯೇ ಒಲಿದು ಬರುತ್ತವೆ. ಕಾಯಶುದ್ಧಿ ಬರೀ ನೀರಿನ ಸ್ನಾನದಿಂದ ಸಾಧ್ಯವಿಲ್ಲ! ಜ್ಞಾನತೀರ್ಥದಿಂದ ನಮ್ಮ ಅಂತರಂಗದ ಕೊಳೆಯನ್ನು ತೊಳೆದಾಗ ಮಾತ್ರ ಲಭ್ಯ. ಹೊರಗೆ ಮಿಂದು ಒಳಗೆ ಮೀಯದವರ ಕಂಡು ಬೆರಗಾಗಿ ನಗುತಿದ್ದ 'ಪುರಂದರವಿಠಲ' ಪರಿಶುದ್ಧ ಮನಸ್ಸು ಪರಿಶುದ್ಧ ಶರೀರವುಳ್ಳವನಿಂದ ಪರಿಶುದ್ಧ ವಾಕ್ಯಗಳು ಸಹಜವಾಗಿ ಬರುತ್ತವೆ. ಮನಃಸ್ಥೈರ್ಯವಿದ್ದಲ್ಲಿ ಮನುಷ್ಯ ಏನನ್ನು ಬೇಕಾದರೂ ಸಾಧಿಸಬಹುದು. ಸಕಲವೆಲ್ಲವು ಹರಿಸೇವೆ' ಎನ್ನುವ ನಿರ್ಲಿಪ್ತತೆ. ಎಲ್ಲವೂ ಕೃಷ್ಣಾರ್ಪಣವೆನ್ನುವ ಹೃದಯ ವೈಶಾಲ್ಯ ಪರಿಶುದ್ಧ ಮನಸ್ಸುಗಳಿಗೆ ಮಾತ್ರ ಸಾಧ್ಯ. ಹೃದಯ ಮನಸ್ಸುಗಳ ಶುದ್ಧಿಗೆ ದಾನ-ಧರ್ಮ, ಜಪ-ತಪ, ಹಬ್ಬ-ಹರಿದಿನಗಳ ಆಚರಣೆ, ಗುರುಹಿರಿಯರಿಗೆ ನಮಸ್ಕರಿಸಿ ಆಶೀರ್ವಾದ ಪಡೆಯುವುದು ಹಸಿದವರನ್ನು ಕರೆದು ಅನ್ನವನಿಕ್ಕುವುದು... ಇಂತಹ ಅನೇಕ ಆಚರಣೆಗಳನ್ನು ನಮ್ಮ ಸಮಾಜ ರೂಢಿಸಿಕೊಂಡಿದೆ. ಆದರೆ ಅವು ಇಂದು ತಮ್ಮ ಮೂಲಸ್ವರೂಪಗಳಲ್ಲಿ

ಉಳಿದಿಲ್ಲವಾದ್ದರಿಂದ ಎಷ್ಟೋ ವೇಳೆ ವ್ಯತಿರಿಕ್ತ ಪರಿಣಾಮಗಳಾಗುವುದೂ ಉಂಟು. ಹಬ್ಬಗಳ ಆಚರಣೆಯನ್ನೇ ತೆಗೆದುಕೊಳ್ಳೋಣ. ಸಾಲ ಮಾಡಿ ಪರರನ್ನು ಬೇಡಿ ಹಬ್ಬ ಮಾಡುವ ಅನಿವಾರ್ಯತೆ ಇದೆಯೇ? ಖಂಡಿತ ಇಲ್ಲವೆಂದಿದ್ದಾರೆ. ವಿಜಯದಾಸರು ತಮ್ಮ ಹಬ್ಬ ಸುಳಾದಿಯಲ್ಲ

ಮಂದಿರದಲ್ಲಿ ಕಲಹ ಇಲ್ಲದ್ದೆ ಹಬ್ಬ
ನಿಂದೆ ಬಾರದಂತೆ ಬಾಳುವುದೆ ಹಬ್ಬ
ಋಣರೂಪವಾಗದೆ ಸಂಸಾರವೆ ಹಬ್ಬ

ಇಲ್ಲಿಯ ಒಂದೊಂದು ಮಾತೂ ಮತ್ತೆ ಮತ್ತೆ ಮೆಲುಕು ಹಾಕುವಂತಿದೆ. ಒಂದು ಸಂಸಾರದಲ್ಲಿ ಶಾಂತಿ ಸಮಾಧಾನ ನೆಲೆಸಲು ದಂಪತಿಗಳ ಒಮ್ಮತ ಸಮ್ಮತಿಗಳಿಗಿಂತ ಹೆಚ್ಚಿನದೇನಿದೆ? ಅಂದು ವಿಜಯದಾಸರು ಹಬ್ಬದ ಆಚರಣೆಗೆ ಮಾಡಿದ ವ್ಯಾಖ್ಯಾನ ಇಂದಿಗೂ ಬೆಲೆಯುಳ್ಳದ್ದಾಗಿದೆ. ಜನರ ಕಣ್ಣು ತೆರೆಸುವಂತಿದೆ.

ಅಂತೆಯೇ ಸಮಾಜದಲ್ಲಿರುವ ಬಡವರು, ಕೆಳವರ್ಗದವರು ಮಾರಿ ಮಸಣಿಗಳ ಹೆಸರಿನಲ್ಲಿ ಪೂಜೆ ಮಾಡಿಸಿ ಹರಕೆ ತೀರಿಸುವ ನೆಪದಲ್ಲಿ ಕೈಯಲ್ಲಿರುವ ಪುಡಿಗಾಸನ್ನೂ ಕಳೆದುಕೊಂಡು ಬರಿಗೈಯ್ಯಾಗುತ್ತಾರೆ. ಅಂತಹವರಿಗೆ ಕನಕದಾಸರು ಹೇಳಿರುವ ವಿವೇಕದ ಮಾತುಗಳನ್ನು ಕೇಳಿ,

ಸುತ್ತಣವರ ಮಾತು ಕೇಳಿ ಖೂಳರೆಲ್ಲರು ಕೂಡಿಕೊಂಡು
ಹಾಳುಮಾಡಿ ಕೈಯಲಿದ್ದ ಹೊನ್ನು ಹಣಗಳ
ಬಾಳುತಿಪ್ಪ ಕೋಣಕುರಿಯ ಏಳಬೀಳ ಕೊರಳಕೊಯ್ದು
ಬೀಳಬೇಡಿ ನರಕಕೆಂದು ಹೇಳಬಂದೆನೊ.

ಬದಲಾಗಿ ಆದಿಕೇಶವನ ಚರಣಗಳನ್ನು ಸ್ಮರಿಸಿ ಮುಕ್ತಿ ಪಡೆಯಿರೆಂದು ಬುದ್ಧಿ ಹೇಳಿರುವರು. ಇಂದಿಗೂ ಅಕ್ಷರಶಹ ನಡೆಯುತ್ತಿರುವ ವ್ಯವಹಾರವಿದು. ಹಕ್ಕಿ ಶಕುನ, ಕೊರವಂಜಿ, ಭವಿಷ್ಯ ಶಕುನಗಳನ್ನು ರಾಹುಕಾಲಗಳನ್ನು ನೋಡುವುದು, ಗ್ರಹಗೋಚಾರ ಫಲಗಳನ್ನು ಕೇಳುವುದು ಗ್ರಹಚಾರ, ಪರಿಹಾರಕ್ಕೆಂದು ಸಾವಿರಾರು ರೂಪಾಯಿ ಖರ್ಚು ಮಾಡಿ ಹವನ ಹೋಮ ಶಾಂತಿಗಳನ್ನು ಮಾಡಿಸುವುದು. ವಾಸ್ತುರಚನೆಯ ಬಗ್ಗೆ ಕಾಳಜಿವಹಿಸಿ ಕಟ್ಟಡಗಳನ್ನೇ ಕೆಡಹಿ ವಾಸ್ತುಶಾಸ್ತ್ರ ಪ್ರಕಾರ ಕಟ್ಟಿಸಲು ಹೊರಡುವುದು – ಇಂತಹ ಅನೇಕ ಮೌಢ್ಯಗಳು ನಮಗೆ ಅಂಟಿಕೊಂಡೇ ಬಂದಿವೆ. ಇವುಗಳನ್ನೆಲ್ಲ ನಂಬಿ ದೋಷ ಪರಿಹಾರಕ್ಕೆಂದು ಸಾಲ ಮಾಡಿ ಪಾಡುಪಡುವ ಲಕ್ಷಾಂತರ ಮಂದಿ ನಮ್ಮ

ನಡುವೆಯೇ ಬದುಕುತಿದ್ದಾರೆ. ಅಂಥವರನ್ನು ಕುರಿತು ಹರಿದಾಸರು ಹೇಳಿರುವ ತಿಳಿವಳಿಕೆಯ ಮಾತುಗಳು ಇಂದಿಗೂ ಪ್ರಸ್ತುತವಲ್ಲವೆ?

ಹರಿದಾಸರು ಪ್ರಸ್ತಾಪಿಸಿರುವ ಸಾಮಾಜಿಕ ಪಿಡುಗುಗಳಲ್ಲಿ ಕುಲ, ಜಾತಿ, ಮತಗಳನ್ನು ಕುರಿತಂಥವು ಹೆಚ್ಚು ಕಡಿಮೆ ಐನೂರು ವರ್ಷಗಳ ಬಳಿಕವೂ ಇಂದು ಅದೇ ಸ್ಥಿತಿಯಲ್ಲೇ ಇವೆ.

ಕುಲಕುಲಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರಾ?

ಸಕಲ ಜೀವಿಗಳಿಗೂ ಜೀವಸೆಲೆಯಾಗಿರುವ ಜಲದ ಕುಲದ ನಿಮಗೆ ತಿಳಿದಿದೆಯೆ? ಆತ್ಮ ಯಾವ ಕುಲ? ಜೀವ ಯಾವ ಕುಲ ಇತ್ಯಾದಿ ಹಲವು ಹತ್ತು ಮೂಲಭೂತ ಪ್ರಶ್ನೆಗಳನ್ನೆತ್ತಿ ಕುಲದ ಮದದಿಂದ ಬೀಗುವವರ ಕಣ್ಣು ತೆರೆಸಲೆತ್ನಿಸಿದ್ದಾರೆ. ಅವರ ಕಾಲದಲ್ಲಿ ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತಾ ನಡೆದಿದ್ದ ಜಾತಿ ವರ್ಗ ಭೇದಗಳ ಕಂದರಗಳನ್ನು ಮುಚ್ಚುವ ಪ್ರಯತ್ನ ಪುರಂದರದಾಸರು ಮತ್ತು ಕನಕದಾಸರದು. ಈ ಹೊತ್ತಿಗೂ ಆ ದಿಕ್ಕಿನಲ್ಲಿ ನಮ್ಮ ಹೋರಾಟ ನಡೆಯುತ್ತಲೇ ಇದೆ. ಇನ್ನೂ ಮುಖ್ಯವಾದ ಸಂಗತಿಯೆಂದರೆ ಪುರಂದರದಾಸರು ಕನಕದಾಸರು ಜಾತಿಯನ್ನು ವರ್ಗೀಕರಿಸುವ ವಿನೂತನ ರೀತಿ ಹೊಲೆಯರನ್ನು ಊರ ಹೊರಗಿಟ್ಟವರ ಅವಿವೇಕವನ್ನು ಬೊಟ್ಟುಮಾಡಿ ತೋರಿಸಿ 'ಹೊಲೆಯ ಹೊರಗಿಹನೆ, ಊರೊಳಗಿಲ್ಲವೆ?' ಎಂದು ಪ್ರಶ್ನಿಸಿ ಊರೊಳಗೇ ಸಾವಿರಾರು ಸಂಖ್ಯೆಯಲ್ಲಿರುವ 'ಹೊಲೆಯ'ರನ್ನು ಪಟ್ಟಿಮಾಡಿ ನಮ್ಮೆದುರಿನಲ್ಲಿ ಇಟ್ಟಿದ್ದಾರೆ. ಧನವಿದ್ದೂ ದಾನ ಮಾಡದವ ಹೊಲೆಯ ದುಶ್ಚಾರಿತ್ರವುಳ್ಳವ ಹೊಲೆಯ; ದುರಾಚಾರಿ ಕೊಟ್ಟ ಮಾತಿಗೆ ತಪ್ಪುವವ, ಹೇಡಿ, ಸುಳ್ಳು, ಹಾದರ ಮಾಡುವವ ಹೊಲೆಯ. ಪುರಂದರದಾಸರು ಮತ್ತು ಕನಕದಾಸರ ದೃಷ್ಟಿಯಲ್ಲಿ ಜಾತಿ ಗುಣಕರ್ಮಗಳನ್ನು ಆಧರಿಸಿದ್ದು ಹುಟ್ಟಿನಿಂದ ಬರುವಂಥದ್ದಲ್ಲ. ಆಯಾ ವ್ಯಕ್ತಿಯ ಸಂಸ್ಕಾರ ಅವನವನ ಜಾತಿಯನ್ನು ನಿರ್ಧರಿಸುತ್ತದೆ. ಈ ವಿಚಾರವನ್ನು ಈ ಇಪ್ಪತ್ತೊಂದನೆಯ ಶತಮಾನದಲ್ಲೂ ನಮಗೆ ಅರಗಿಸಿಕೊಳ್ಳಲು ಸಾಧ್ಯವಾಗಿಲ್ಲ. ಈ ನಿಟ್ಟಿನಲ್ಲಿ ಪ್ರಯತ್ನಗಳು ಮಾತ್ರ ಇನ್ನೂ ನಡೆಯುತ್ತಲೇ ಇವೆ. ಇಂತಹ ಸಾಮಾಜಿಕ ಸಂದರ್ಭದಲ್ಲಿ ಇವರೀರ್ವರ ಇಂತಹ ಕೀರ್ತನೆಗಳು ಕುರುಡನಿಗೆ ಊರುಗೋಲು ದೊರೆತಂದೆ.

ಪುರಂದರದಾಸರು ಮತ್ತು ಕನಕದಾಸರು ತಾವು ಕಂಡುಂಡ ಸಾರ್ವಕಾಲಿಕ ಮೌಲ್ಯಗಳನ್ನು ಚಿರಂತನ ಸತ್ಯಗಳನ್ನು ಜನರಿಗೆ ಮುಟ್ಟಿಸಲು ಕೆಲವು ಸರಳ ಸುಲಭವಾದ

ತಂತ್ರಗಳನ್ನು ಜನರಿಗೆ ಮುಟ್ಟಿಸಲು ಕೆಲವು ಸರಳ ಸುಲಭವಾದ ತಂತ್ರಗಳನ್ನು ಬಳಸಿಕೊಂಡಿದ್ದಾರೆ. ಭಾರತೀಯರ ವಿಶೇಷತೆಯೆಂದರೆ ನಿರಕ್ಷರಕುಕ್ಷಿಗಳಿಗೂ ರಾಮಾಯಣ, ಮಹಾಭಾರತ, ಭಾಗವತ ಹರಿಶ್ಚಂದ್ರ ಕಾವ್ಯ ಇತ್ಯಾದಿ ಅಭಿಜಾತ ಗ್ರಂಥಗಳ ಕತೆ ಗೊತ್ತು. 'ಮಕ್ಕಳಿಂದ ಮುದುಕರವರೆಗೆ ಜಾತಿ ಮತ ಲಿಂಗಭೇದವಿಲ್ಲದೆ ಎಲ್ಲರೂ ಮೆಚ್ಚುವ ಕೃತಿಗಳಿವು. ಇಂತಹ ಧಾರ್ಮಿಕ ಗ್ರಂಥಗಳ ಸ್ಥೂಲ ಪರಿಚಯವಾದರೂ ಇಲ್ಲದ ಭಾರತೀಯನೇ ಇಲ್ಲವೆಂದರೂ ತಪ್ಪಾಗದು. ನಮ್ಮ ಈ ಧಾರ್ಮಿಕ ಗ್ರಂಥಗಳನ್ನಾಧರಿಸಿ ಇವತ್ತಿಗೂ ಪುಂಖಾನುಪುಂಖವಾಗಿ ಬರುತ್ತಿರುವ ಕತೆ, ಕಾದಂಬರಿ, ಕಾವ್ಯ, ಮಹಾಕಾವ್ಯ, ನಾಟಕ, ಯಕ್ಷಗಾನ, ನೃತ್ಯರೂಪಕ, ಹರಿಕಥೆ, ತಾಳಮದ್ದಲೆ ಮೊದಲಾದವು ಜನಪ್ರಿಯತೆಗೆ ಸಾಕ್ಷಿಯಾಗಿವೆ. ಅವುಗಳಲ್ಲಿ ಹುದುಗಿರುವ ಜೀವನಾನುಭವವೇ ಅದಕ್ಕೆ ಕಾರಣ. ಮನುಷ್ಯನ ಮೂಲಭೂತ ಪ್ರವೃತ್ತಿಗಳು, ಭಾವನೆ – ಆಲೋಚನೆಗಳು, ಆದರ್ಶಗಳು, ನಡಾವಳಿಕೆ, ಸ್ವಾರ್ಥ ಅಹಂಕಾರಾದಿ ದೌರ್ಬಲ್ಯಗಳು ಇವೆಲ್ಲವುಗಳ ಚಿತ್ರಣಗಳೇ ಕಥೆಯಾಗಿ ಪಾತ್ರಗಳ ಮೂಲಕ ಹಾದುಬಂದಿರುವುದು. ನಮ್ಮ ನಿಮ್ಮ ನಡುವಣ ಜೀವಂತ ವ್ಯಕ್ತಿಗಳೇ ಆ ಪಾತ್ರಗಳು. ಸೀತೆ, ರಾಮ, ಭರತ, ಧರ್ಮರಾಯ, ಭೀಷ್ಮರಂಥವರು ಸ್ವಲ್ಪಮಟ್ಟಿಗೆ ನಮ್ಮ ಆದರ್ಶಗಳಾಗಿರಬಹುದು. ಆದರೆ ಕೈಕೆ, ಮಂಥರೆ, ಮಂಡೋದರಿ, ಶೂರ್ಪನಖಿ, ಕೀಚಕ, ಶಕುನಿಯಂಥ ಪಾತ್ರಗಳು ನಮ್ಮೊಂದಿಗೇ ಇರುವುದು ಸುಳ್ಳಲ್ಲ. ಪುರಂದರದಾಸರು ಮತ್ತು ಕನಕದಾಸರ ಸಾಹಿತ್ಯ ಕೂಡ ನಮ್ಮ ಋಷಿಮುನಿಗಳ ಇಂತಹ ಕಾವ್ಯಗಳನ್ನಾಧರಿಸಿ ಅವರ ಜೀವನಾನುಭವದೊಂದಿಗೆ ಇವರ ಜೀವನಾನುಭವವೂ ಸೇರಿಯೇ ಬಂದಿರುವಂಥ ಸಾಹಿತ್ಯ. ಜನರ ಮನೋಭಾವವನ್ನು ಅರಿತಿರುವ ಇವರೀರ್ವರು ಈ ಪುರಾಣಗಳನ್ನು ಬಹಳ ಶಕ್ತಿಯುತ ಮಾಧ್ಯಮವಾಗಿ ಬಳಸಿಕೊಂಡಿರುವುದೂ ಒಂದು ತಂತ್ರ.

ಕುಟುಂಬದ ಸಮಾಜದ ದೇಶದ ರಾಷ್ಟ್ರದ ಸ್ವಾಸ್ಥ್ಯಕ್ಕೆ ಪ್ರೀತಿ ಎಷ್ಟು ಅನಿವಾರ್ಯವೆಂಬುದು ಗಮನಾರ್ಹ. ಈ ದೃಷ್ಟಿಯಿಂದ ಪ್ರೀತಿಯನ್ನು ಬಿತ್ತಿ ಬೆಳೆಯುವ ಪುರಂದರದಾಸರು ಮತ್ತು ಕನಕದಾಸರ ಸಾಹಿತ್ಯ ಸಮಾಜಕ್ಕೆ ಅತ್ಯಗತ್ಯವೆಂಬುದರಲ್ಲಿ ಎರಡು ಮಾತಿಲ್ಲ. ಬಿಡಿಗಾಸೂ ಖರ್ಚಿಲ್ಲದೆ ಎಲ್ಲರಿಗೂ ಧಾರಾಳವಾಗಿ ಮೊಗೆಮೊಗೆದು ಹಂಚಬಲ್ಲ ಪ್ರೀತಿಯ ಕಣಜ ಮನುಜನ ಹೃದಯ ಬತ್ತದ ಒರತೆಯದು. ಆದರೆ ಆ ವಿಚಾರದಲ್ಲಿ ನಾವು ಅತ್ಯಂತ ಜಿಪುಣರಾಗಿ ವರ್ತಿಸುತ್ತೇವೆ. ಪ್ರೀತಿಯೆಂಬ ಜೀವನಮೌಲ್ಯವನ್ನು ತಮ್ಮ ನಡೆ-ನುಡಿಗಳಿಂದ ತೋರಿಸಿ ಕೊಟ್ಟವರು ಸಮಾಜಕ್ಕೆ ನಿರ್ವಂಚನೆಯಿಂದ ಧಾರಾಳವಾಗಿ ಹಂಚಿಕೊಟ್ಟವರು ಹರಿದಾಸರು 'ಒಬ್ಬ ವ್ಯಕ್ತಿಯನ್ನು

ಪ್ರೀತಿಸುವುದು ಎಂದರೆ ಆ ವ್ಯಕ್ತಿಯ ಬೆಳವಣಿಗೆಯ ಬಗ್ಗೆ, ಸರ್ವತೋಮುಖ ಪ್ರಗತಿಯ ಬಗ್ಗೆ ತಾನು ಜವಾಬ್ದಾರನೆಂಬ ಭಾವನೆಯನ್ನು ಹೊಂದಿ, ಆತನನ್ನು ಗಮನವಿಟ್ಟು ನೋಡಿಕೊಳ್ಳುವುದು ಎನ್ನುತ್ತಾ, ಎರಿಕ್‌ಫ್ರೋಮ್ ಎಂಬ ಪಾಶ್ಚಾತ್ಯ ಚಿಂತಕ. ಹಾಗೆಯೇ ಸ್ವಾಮಿ ವಿವೇಕಾನಂದರು ಒಂದು ಕಡೆ ಹೇಳುತ್ತಾರೆ. 'ಪ್ರೀತಿಗಾಗಿ ಹಾತೊರೆಯುತ್ತಿರುವ ಜಗತ್ತಿಗೆ ಪ್ರತಿಫಲವನ್ನು ಅಪೇಕ್ಷಿಸದೆ ನಾವದನ್ನು ಹಂಚಬೇಕು ಎಂದು ಪುರಂದರದಾಸರು ಮತ್ತು ಕನಕದಾಸರು ಸುಮಾರು ಆರುನೂರು ವರ್ಷಗಳ ಹಿಂದೆಯೇ ಆ ಕೆಲಸವನ್ನು ಪ್ರಾಮಾಣಿಕವಾಗಿ ಮಾಡಿದ್ದಾರೆ ಎನ್ನುವುದಕ್ಕೆ ಅವರ ಕೃತಿ ಸಮೂಹವೇ ಸಾಕ್ಷಿ.

# ಉಪಸಂಹಾರ

ಪುರಂದರದಾಸರು ಮತ್ತು ಕನಕದಾಸರು ಜನರ ನಡುವೆಯೇ ನಡೆಯುತ್ತ ನರ್ತಿಸುತ್ತ ಎದುರಿನಲ್ಲಿ ಎಲ್ಲರೂ ನೋಡುತ್ತಿರುವ ಅಥವಾ ಕೇಳುತ್ತಿರುವ ವಸ್ತು ವಿಷಯಗಳನ್ನೇ ತಮ್ಮ ಕೀರ್ತನೆಯ ವಸ್ತುವಾಗಿ ಬಳಸಿಕೊಂಡು ಆ ಮೂಲಕ ತಮ್ಮ ವಿಚಾರಗಳನ್ನು ಜನರ ಮುಂದಿಡುವ ಕಲೆಯಲ್ಲಿ ಪರಿಣಿತರು, ಕಾಗೆ ಕೂಗಿದ್ದು, ಕೋಳಿಯ ಕೂಗು, ಗಂಟೆ ಬಾರಿಸಿದ್ದು ಡಂಗೂರ ಹೊಯ್ದದ್ದು, ಕಾಗದ ಹಂಚುವುದು, ಬುತ್ತಿ ಕಟ್ಟುವುದು, ಕಲ್ಲುಸಕ್ಕರೆ ಕೊಟ್ಟಿದ್ದು. ಈ ಎಲ್ಲಾ ದಿನನಿತ್ಯದ ವ್ಯವಹಾರಗಳನ್ನೂ ಆಗುಹೋಗುಗಳನ್ನೂ ದಾಸರು ತಮ್ಮ ಉಪದೇಶದ, ತತ್ತ್ವ ಪ್ರಸಾರದ ಮಾಧ್ಯಮಗಳನ್ನಾಗಿ ಬಳಸಿಕೊಂಡು ಇದ್ದಕ್ಕಿದ್ದಂತೆಯೇ ಅವುಗಳಿಗೆ ಒಂದು ಆಧ್ಯಾತ್ಮಿಕ ತಿರುವು ಕೊಡುವ ಮೂಲಕ ಉದ್ದೇಶಿತ ಪರಿಣಾಮವನ್ನು ಸಾಧಿಸಿದ್ದಾರೆ.

ಬೆಳಕು ಹರಿಯುತ್ತಿದ್ದಂತೆಯೇ 'ಕಾ, 'ಕಾ' ಎಂದು ಅರಚಿಕೊಳ್ಳುವ ಕೊಕ್ಕೋಕ್ಕೋ ಎಂದು ಕೂಗಿ ಎಬ್ಬಿಸುವ ಕಾಗೆ-ಕೋಳಿಗಳ ಕೂಗು ಲಕ್ಷ್ಮೀಲೋಲನಲ್ಲದೆ ಅನ್ಯರಾರಿಲ್ಲವೆಂದು ..... ಮುಕುಂದನಲ್ಲದೆ, ಅನ್ಯರಾರಿಲ್ಲವೆಂದು ಮಲ್ಲಿಗೆ ಮುಡಿಯವರು ಮರೆದೊರಗೆ **ಲೇಡಿ** ಪೂಜಾ ಸಮಯವಿದೆಂದು ಕೇಳಿಸಿದೆ. ಹರಿದಾಸರಿಗೆ ಹಾಗೆ ತಾವು ಕೇಳಿಸಿಕೊಂಡದ್ದಲ್ಲದೆ ಅಲ್ಲಿ ಸುತ್ತ ನೆರೆದವರೆಲ್ಲರಿಗೂ ನೋಡಿ ಹೀಗೆ ಕೂಗುತ್ತಿದೆ. ಕೇಳಿ ಎಂದು ಅವರ ಗಮನ ಸೆಳೆದು ಹರಿಸರ್ವೋತ್ತಮ ತತ್ತ್ವವನ್ನು ಪೂಜಾ ಸಮಯವಾಯಿತೆಂಬ ಎಚ್ಚರಿಕೆಯನ್ನು ಜನರಿಗೆ ಮುಟ್ಟಿಸುತ್ತಾರೆ. ಚಂಚಲ ಮನಸ್ಸಿನ ಸೋಮಾರಿಗಳಿಗೆ ಇಂತಹ ಎಚ್ಚರದ ಮಾತುಗಳು ಅತ್ಯಗತ್ಯ ಕಾಲ ಸರಿದುಹೋಗುತ್ತಿರುವ ಬಗ್ಗೆ ಚುರುಕು ಮುಟ್ಟಿಸುವ ಚಾಟಿಯೇಟುಗಳವು. ಸದಾಚಾರ ಸತ್ಸಂಗಾದಿಗಳನ್ನು ಜನರ ಮನಸ್ಸಲ್ಲಿ ಬಿತ್ತಿದ ಕೀರ್ತಿ ಇವರೀರ್ವರದು.

ಇವರಿಬ್ಬರ ಕೀರ್ತನೆಗಳು ಸೂತ್ರಪ್ರಾಯವಾಗಿ, ಗಾದೆ ಮಾತುಗಳಂತೆ ಬರುವ ಸಾವಿರಾರು ಅನುಭವದ ರಸಗಟ್ಟಿಗಳು ಇಂದಿಗೂ ನಮ್ಮೆಲ್ಲರ ದಾರಿದೀಪವಾಗಿವೆ. ಇವುಗಳಲ್ಲಿ ಕೌಟುಂಬಿಕ ವಿಡಂಬನೆ, ಡಾಂಬಿಕ ಭಕ್ತಿಯ ವಿಡಂಬನೆ, ಪ್ರಭುತ್ವ ವಿಡಂಬನೆ, ಪರಸ್ತ್ರೀಯರ ವಿಡಂಬನೆ, ಜಾತಿ ವಿಡಂಬನೆ ಇಂತಹ ಮಹತ್ವವಾದ ಅಂಶಗಳನ್ನು ಇದುವರೆಗೆ ಚರ್ಚಿಸಿದ ಎಲ್ಲಾ ವಿಚಾರಗಳೂ ೨೧ನೇ ಶತಮಾನದ ಸಾಹಿತ್ಯಕ್ಕೂ ಸ್ಫೂರ್ತಿಯಾಗಿವೆ. ಇವು ಬದುಕಿಗೆ ಎಷ್ಟು ಹತ್ತಿರವಾಗಿದೆಯೆಂಬುದು. ಇದನ್ನು ಓದಿದ ನಂತರ ವೇದ್ಯವಾಗುತ್ತದೆ. ಅಂದಿನ ಜೀವನ ಮೌಲ್ಯಗಳೇ ಇಂದಿಗೂ ಉಳಿದು

ಬಂದಿರುವುದು ನಮ್ಮ ಸಂಸ್ಕೃತಿಯ ಕುರುಹು ಹಾಗೂ ಹೆಗ್ಗಳಿಕೆ. ಎಲ್ಲಿಯವರೆಗೆ ನಮ್ಮ ನಾಡಿನ ಸಂಸ್ಕೃತಿ ಜೀವಂತವಾಗಿರುತ್ತದೋ ಅಲ್ಲಿಯವರೆಗೂ ಪುರಂದರದಾಸ ಮತ್ತು ಕನಕದಾಸರ ಸಾಹಿತ್ಯ ನಮಗೆ ಮೌಲಿಕವಾದುದೇ ಆಗಿರುತ್ತದೆ. ಅದರಲ್ಲೂ ಮೌಲ್ಯಗಳು ಬದಲಾಗುತ್ತಿರುವ ಈ ಹೊತ್ತಿನಲ್ಲಿ ಇವರ ಸಾಹಿತ್ಯದ ಅಗತ್ಯ ಎಂದಿಗಿಂತಲೂ ನಮಗೆ ಹೆಚ್ಚಾಗಿದೆ. ಹೆಣ್ಣುಮಕ್ಕಳನ್ನು ಸೀಮೆಎಣ್ಣೆ ಸುರಿದು ಬೆಂಕಿಹಚ್ಚಿ ಕೊಲ್ಲುವ ಕ್ರೌರ್ಯ, ಹೆಣ್ಣುಭ್ರೂಣಹತ್ಯೆ, ಅಮಾಯಕರನ್ನು ಕೊಚ್ಚಿ ಕೊಲ್ಲುವ ಭಯೋತ್ಪಾದಕತೆ, ದಿನನಿತ್ಯ ನಡೆಯುತ್ತಿರುವ ಕೊಲೆ ಸುಲಿಗೆ ಅತ್ಯಾಚಾರಗಳು –ಇವೆಲ್ಲವು ಮನುಷ್ಯ ಮೃಗವಾಗುತ್ತಿರುವುದರ ಸಂಕೇತವೇ ಆಗಿದೆ. ಮನುಷ್ಯ ಮನುಷ್ಯನಾಗಿ ಬಾಳುವ ಬಗೆಯನ್ನು ತೋರಿಸಿಕೊಟ್ಟಿರುವ ಇವರೀರ್ವರ ಸಾಹಿತ್ಯದ ಜೀವನ ಪ್ರೀತಿ, ಅತಿಯನ್ನು ಹಾಗೆ ಸಾಮಾಜಿಕ ವಿಡಂಬನೆಯನ್ನು ಬಿಟ್ಟು ಮಿತಿಯಲ್ಲಿರುವ ಸಂಕಲ್ಪ ಈ ಹೊತ್ತಿಗೂ ನಮಗೆ ಮಾರ್ಗದರ್ಶಿ ಇವರ ನಡೆ–ನುಡಿ ಒಂದಾದ ಬದುಕು ಅನುಕರಣೀಯ.

ಶೈಕ್ಷಣಿಕ ಅಭ್ಯಾಸದ ದೃಷ್ಟಿಯಿಂದ ಕೂಡ ಇವರೀರ್ವರ ಸಾಹಿತ್ಯ ಒಳ್ಳೆಯ ಪಥ್ಯ ತತ್ತ್ವಶಾಸ್ತ್ರ ಮತ್ತು ಜಾನಪದೀಯ ನೆಲೆಗಳಿಂದ ಮನಶ್ಯಾಸ್ತ್ರ ಸಮಾಜಶಾಸ್ತ್ರಗಳ ಶಿಸ್ತಿನಿಂದ, ಭಾಷಿಕ ಹಾಗೂ ಸ್ತ್ರೀವಾದಿ ನೆಲೆಯಿಂದ, ಛಂದಸ್ಸು ಮತ್ತು ಸಂಗೀತ ಶಾಸ್ತ್ರಗಳ ಹಿನ್ನೆಲೆಯಿಂದ ಒಟ್ಟಾರೆ ಕನ್ನಡನಾಡಿನ ಸಂಸ್ಕೃತಿಯ ದೃಷ್ಟಿಯಿಂದ ಅಭ್ಯಾಸ ಮಾಡಲು ಯೋಗ್ಯಪಥ್ಯವಾಗಿದೆ. ಪುರಂದರದಾಸರ ಮತ್ತು ಕನಕದಾಸರ ಸಾಹಿತ್ಯದ ತವನಿಧಿ ಇಂದಿಗೂ ನಮಗೆ ಅಗತ್ಯವಾಗಿದೆ.

# ಅನುಬಂಧ

**ಕಠಿಣ ಪದಗಳು**

| | | |
|---|---|---|
| ಭುಜನ | – | ಹಾಳು; ನಾಶ |
| ಜವನ | – | ವೇಗ; ರಭಸ |
| ನವನೀತ | – | ಕೆನೆ ಕಡೆದು ಹೊಸದಾಗಿ ತೆಗೆದ ಬೆಣ್ಣೆ |
| ಧರಣಿಧರ | – | ಭೂಮಿಯ ಒಡೆಯ |
| ಜೋಗಿಣಿ | – | ಜೋಗಿನಿ, ತಪಸ್ವಿನಿ |
| ದುರಿತ | – | ಪಾಪ, ಪಾತಕ, ಕೇಡು, ಅಪಾಯ, ಎಂಟು ಎಂಬ ಸಂಖ್ಯೆ |
| ಅವನಿ | – | ಭೂಮಿ |

# ಪರಾಮರ್ಶನ ಸಾಹಿತ್ಯ


೧. ಡಾ.ಟಿ.ಹೆಚ್ ನಾಗರತ್ನ : ಹರಿದಾಸ ಸಾಹಿತ್ಯದ ಪ್ರಸ್ತುತತೆ, ಪ್ರಸಾರಾಂಗ, ಮೈಸೂರು ವಿ.ವಿ. ಮೊದಲ ಮುದ್ರಣ ೨೦೦೯.

೨. ಪ್ರೊ.ಎ.ವಿ.ನಾವಡ, ಡಾ ಗಾಯತ್ರಿ ನಾವಡ[ಸಂ]: : ಸಾವಿರಾರು ಕೀರ್ತನೆಗಳು, ಅಂಕಿತ ಪುಸ್ತಕ, ಗಾಂಧಿಬಜಾರ್, ಬೆಂಗಳೂರು-೫೬೦೦೦೪ ಮೊದಲ ಮುದ್ರಣ -೧೯೯೯

೩. ಡಾ.ಹರಿಲಾಲ ಪವಾರ, ಡಾ.ಚಂದ್ರಶೇಖರ ರೊಟ್ಟಿಗವಾಡ[ಸಂ] : ಕನಕದಾಸರ ಸಾಹಿತ್ಯ ಅಧ್ಯಯನ, ಪ್ರಸಾರಾಂಗ, ಕರ್ನಾಟಕ ವಿ.ವಿ, ಧಾರವಾಡ, ೨೦೧೦

೪. ಡಾ.ಸಬಿಹಾ ಭೂಮಿಗೌಡ : ಕನ್ನಡ ಸಾಹಿತ್ಯ ಮೀಮಾಂಸೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಬೆಂಗಳೂರು – ೫೬೦೦೦೨

೫. ಕೆ .ಬಿ ತಳಗೇರಿ : ರಾಮಧಾನ್ಯ ಚರಿತ್ರೆ, ವಿದ್ಯಾನಿಧಿ ಪ್ರಕಾಶನ, ೧೯೮೯, ಗದಗ್

೬. ವಸಂತ ಕುಷ್ಟಗಿ : ದಾಸ ಸಾಹಿತ್ಯದ ಆದಿಯಲ್ಲಿ, ಬತೇರೇಶ ಪ್ರಕಾಶನ ಕಲ್ಬುರ್ಗಿ, ೧೯೮೪

೭. ಕನಕದಾಸರ ಜನಪ್ರಿಯ ಕೀರ್ತನೆಗಳ[ಸಂ] : ಹೊ.ರ.ಸತ್ಯನಾರಾಯಣರಾವ್, ಅಂಕಿತ ಪ್ರಕಾಶನ ೨೦೦೮ ಬೆಂಗಳೂರು

೮. ಹ.ರ.ನಾಗರಾಜಾಚಾರ್ಯ, : ದಾಸ ಸಾಹಿತ್ಯ ಸಾಗರ[ಸಂ], ಶ್ರೀ ಹರಿದಾಸ ಸಂಘ್೨೦೧೨, ಬೆಂಗಳೂರು

೯. ರಂ.ಶ್ರೀ.ಮುಗಳಿ : ಕನ್ನಡಸಾಹಿತ್ಯ ಚರಿತ್ರೆ, ಗೀತಾಬುಕ್ ಹೌಸ್ ಪ್ರಕಾಶನ, ೨೦೧೧

೧೦. ಡಾ.ಚಿ.ಸಿ.ನಿಂಗಣ್ಣ : ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಸಿದ್ದಲಿಂಗೇಶ್ವರ ಪ್ರಕಾಶನ ಗುಲ್ಬರ್ಗ, ೨೦೧೦

